ಮುಂಬಯಿ ವಿದ್ಯಾಖಾತೆಯವರಿಂದ ಟೆಕ್ಸ್ಟ ಬುಕ್ಕಿಗಾಗಿ ಮಂಜೂರಾಗಿದೆ.

ಹಿಂದ ಪದ್ಧತಿಯ

# ಜಮಾ ಖರ್ಚು

## ಭಾಗ ೧

●


ಎಚ್. ಬಿ. ಉಮದಿಕರ ಎಂ. ಎ.

ಧಾರವಾಡ.

ಇವರು ರಚಿಸಿದರು.







ಸೋಲ ಏಜಂಟರು:

ಆಕಳವಾಡಿ ಬುಕ್ ಡಿಪೋ

ವಿಜಯ ರೋಡ, ಧಾರವಾಡ

ಬೆಲೆ ೧೦ ಆಣೆ

# ವಿಷಯಾನುಕ್ರಮಣಿಕೆ



# ಜ ಮಾ ಖ ರ್ಚು

## ಒಂದನೆಯ ಪ್ರಕರಣ

### ಮಾಖರ್ಚು ವ್ಯವಹಾರವು

೧. ಜಮಾಖರ್ಚು ಎಂದರೇನು ?
೨. ಮೂರು ಭಾಗಗಳು :— ಕೀರ್ದಿ, ಖತಾವಣಿ, ತೋಂಡಮಿಳವಣಿ. ( ಬಾಯಿಗೂಡಿಸುವದು. )
೩. ವ್ಯವಹಾರ:- (ಅ) ಪರಿಣಾಮ, (ಬ) ರಕಮು, (ಕ) ಖಾತೆ, (ಡ) ತಪಶೀಲು.
೪. ರಕಮು:- (೧) ರೋಖು, (೨) ಪರಭಾರೆ.
೫. ವ್ಯವಹಾರಗಳ ಬರೆಹದ ರೀತಿ.
೬. ಪ್ರಶ್ನಗಳು.

೧. ಮಿತಿವಾರ ನಡೆದ ಹಣದ ವ್ಯವಹಾರಗಳನ್ನು ಪರಿಣಾಮವಾರ, ವ್ಯಕ್ತಿವಾರ, ಬಾಕಿವಾರ, ವಿಲೇವಾರಿ ಮಾಡಿ ಬರೆದಿಡುವ ಲೆಕ್ಕಕ್ಕೆ ಜಮಾಖರ್ಚು ಅನ್ನುವರು.

೨. ಜಮಾಖರ್ಚಿನ ( ಕಾಗದಪತ್ರಗಳ )ಲ್ಲಿ ಮುಖ್ಯವಾಗಿ ಮೂರು ಭಾಗಗಳು :— (೧) ಕೀರ್ದಿ, (೨) ಖತಾವಣಿ, (೩) ತೋಂಡ ಮಿಳವಣಿ ( ಬಾಯಿಗೂಡಿಸುವದು ).

ಈ ಮೂರರ ಉದ್ದೇಶಗಳು ಬೇರೆ ಬೇರೆ ಇರುತ್ತವೆ. ಕೀರ್ದಿಯಿಂದ ಪ್ರತಿ ದಿವಸ ಆದ ವ್ಯವಹಾರಗಳ ರಕಮುಗಳು ತಿಳಿಯುತ್ತವೆ; ಖತಾವಣಿ ಯಿಂದ ಪ್ರತಿಯೊಂದು ವ್ಯಕ್ತಿಯ ಕೂಡ ಮಾಡಿದ ವ್ಯವಹಾರಗಳ ರಕಮು ಗಳು ಗೊತ್ತಾಗುತ್ತವೆ; ತೋಂಡಮಿಳವಣಿಯಿಂದ ವ್ಯಾಪಾರದಿಂದಾದ ಲಾಭ ವನ್ನೂ ಇಲ್ಲವೆ ಹಾನಿಯನ್ನೂ, ಕೊಡುಕೊಳ್ಳುವದನ್ನೂ ಬೇಕಾದಾಗ ತೆಗೆಯಲಿಕ್ಕೆ ಬರುತ್ತದೆ.

ಈ ಮೂರು ಭಾಗಗಳನ್ನು ವಿಚಾರಿಸುವ ಮೊದಲು, ವ್ಯವಹಾರದ ಕಲ್ಪನೆಯು ಹೆಚ್ಚು ಮಹತ್ವದಿದ್ದದರಿಂದ ಇಲ್ಲಿ ವ್ಯವಹಾರವೆಂದರೆ ಏನೆಂಬುವದನ್ನು ವಿಚಾರಿಸುವಾ.

೩ **ವ್ಯವಹಾರ :—** ಹಣದಿಂದ ಪದಾರ್ಥವನ್ನು ಕೊಳ್ಳುವದಕ್ಕೆ (ಖರೀದಿಗೆ) ಇಲ್ಲವೆ, ಹಣದ ಸಲುವಾಗಿ ಮಾರುವದಕ್ಕೆ (ವಿಕ್ರಿಗೆ) ರೂಢಿಯೊಳಗೆ ವ್ಯವಹಾರವೆನ್ನುವರು.

ಇಲ್ಲಿ ಪದಾರ್ಥವೆಂಬ ಶಬ್ದವನ್ನು ಹೆಚ್ಚು ವ್ಯಾಪಕವಾದ ಅರ್ಥದಲ್ಲಿ ಅಂದರೆ ದ್ರವ್ಯ, ಗುಣ, ಕ್ರಿಯೆ ಎಂಬ ಮೂರೂ ರೂಪಗಳಲ್ಲಿ ಉಪಯೋಗಿಸಿರುತ್ತದೆ. **ದ್ರವ್ಯರೂಪ-ಪದಾರ್ಥಗಳು :-** ಆಸ್ತಿಯು (ಸ್ಥಾವರ ಅಥವಾ ಜಂಗಮ) ಪದಾರ್ಥವೆನಿಸುವದು. ಉದಾ :— ಹೊಲ, ಮನೆ, ಮಾಲು, ಯಂತ್ರ, ಧನ, ಠೇವ, ಮುಂತಾದ ಮಾರಲಿಕ್ಕೆ ಬರುವಂಥವು. **ಗುಣರೂಪ-ಪದಾರ್ಥಗಳು :-** ವಚನ, ಪತ್ತು, ಒಳ್ಳೇಹೆಸರು, ಕಾರ್ಯದಕ್ಷತೆ, ಸಮಯ ನಿಷ್ಠತೆ ಮೊದಲಾದವುಗಳು. ಗುಣಗಳು ದ್ರವ್ಯವನ್ನು ಅಥವಾ ಕ್ರಿಯೆಯನ್ನು ಆಶ್ರಯಿಸಿರುತ್ತವೆ. ಉದಾ :— ಬಾಲಗಂಧರ್ವನ ಗಾಯನ, ಗೋವೆಯ ಮಾವಿನಹಣ್ಣು. **ಕ್ರಿಯಾರೂಪ ಪದಾರ್ಥಗಳು :—** ಸೇವೆ, ಉಪಯೋಗ, ಉಪಭೋಗ ಮುಂ. ಸೇವೆ:- ಉದಾ:-ಆಳಿನ ಕೂಲಿ, ಪಗಾರ, ಉಪಯೋಗ:— ಉದಾ:— ಮನೆಭಾಡಿಗೆ, ಟಾಂಗಾಭಾಡಿಗೆ, ಕುದುರೆಯ ಬಾಡಿಗೆ, ಖುರ್ಚಿ ಬಾಡಿಗೆ ಮುಂ. ಉಪಯೋಗ :- ಉದಾ:- ಹೊಲದ ಲಾವಣಿ, ಸಿನೇಮಾ, ನಾಟಕ, ಸರ್ಕಸ್, ಪ್ರದರ್ಶನ ಮೊದಲಾದವುಗಳ ಟಿಕೇಟು ಮುಂ.

ಒಂದು ವ್ಯವಹಾರವು ನಡೆದ ಕೂಡಲೆ ಅದರ (ಅ) ಪರಿಣಾಮ (ಬ) ರಕಮು, (ಕ) ಖಾತೆ, (ಡ) ತಪಶೀಲು ಈ ನಾಲ್ಕು ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ಬೇಕು.

ವ್ಯವಹಾರದಿಂದ ಹಣವು ಬರುವುದು ಅಥವಾ ಹೋಗುವದು ವ್ಯವಹಾರದ ಪರಿಣಾಮವೆನಿಸುವದು. ಹಣವು ಬಂದರೆ ಜಮೆ ಎಂತಲೂ ಹೋದರೆ ಖರ್ಚು ಎಂತಲೂ ಅನ್ನುವರು.

ವ್ಯವಹಾರಗಳ ಪರಿಣಾಮಗಳು ಎರಡು:— ಜಮೆ ಮತ್ತು ಖರ್ಚು

ಉದಾ:— (೧) ರಾಮನಿಂದ ನನಗೆ ೫ ರೂ. ಬಂದವು; ಇಲ್ಲಿ ನಮ್ಮ ಜಮಾಖರ್ಚು ಬರೆಯುವದಾದರೆ ಈ ವ್ಯವಹಾರದ ಪರಿಣಾಮವು ೫ ರೂಪಾಯಿ ಜಮೆ. ರಾಮನ ಜಮಾಖರ್ಚಿನಲ್ಲಿ ಇದೇ ವ್ಯವಹಾರದ ಪರಿಣಾಮವು ೫ ರೂಪಾಯಿ ಖರ್ಚು. ಉದಾ:— (೨) ಗೋಪಾಲನಿಗೆ ನಾವು ೧೦ ರೂಪಾಯಿಗಳನ್ನು ಕೊಟ್ಟೆವು. ಇದರ ಪರಿಣಾಮವು ನಮ್ಮ ಜಮಾಖರ್ಚಿನಲ್ಲಿ ೧೦ ರೂ. ಖರ್ಚು; ಗೋಪಾಲನಲ್ಲಿ ೧೦ ರೂ. ಜಮೆ.

(ಬ) ರಕಮು:— ಈಗ ಬಹುತರ ವ್ಯವಹಾರಗಳು ರಕಮುಗಳಲ್ಲಿ ನಡೆಯುತ್ತವೆ. ಆದುದರಿಂದ ವ್ಯವಹಾರವಾದ ಕೂಡಲೆ ಅದರಿಂದ ಹಣವು ಬಂದಿತೋ ಅಥವಾ ಹೋಯಿತೋ ನೋಡಬೇಕೇ ಹೊರತು ಪದಾರ್ಥವು ಬಂದಿತೋ ಅಥವಾ ಹೋಯಿತೋ ಎಂಬುದನ್ನು ನೋಡುವ ಕಾರಣವಿಲ್ಲ. ಶಂಕರನು ೨ ಆಣೆಗೆ ಒಂದು ಚೆಂಡು ತಂದನು. ಇಲ್ಲಿ ಎರಡಾಣೆ ಹೋಯಿತು. ಆದ್ದರಿಂದ ೨ ಆಣೆ ಖರ್ಚಾಯಿತು. ಚೆಂಡು ಬಂದರೂ ಅದು ಜಮೆಯಲ್ಲ.

(ಕ) ಖಾತೆ:— ಯಾವದಾದರೊಂದು ವ್ಯಕ್ತಿಯ ಸಂಬಂಧವಾಗಿ ಆದ ವ್ಯವಹಾರಗಳನ್ನು ಪರಿಣಾಮವಾರ ಒಂದೇ ಕಡೆಯಲ್ಲಿ ಬರೆಯುವದಕ್ಕೆ ಖಾತೆ ಅನ್ನುವರು. ವ್ಯಕ್ತಿಯೆಂದರೆ ಇಸಮು, ಇಲ್ಲವೇ ಜೀನಸು, ಇಲ್ಲವೆ ಬಾಬು ಇರಬಹುದು.

**ಖಾತೆಗಳ ಹೆಸರು ಗೊತ್ತು ಮಾಡುವುದು ಜಮಾಖರ್ಚಿನಲ್ಲಿ ಬಹಳ ಮಹತ್ವದ ಮಾತು. ವ್ಯವಹಾರ ಮಾಡುವವನ ಉದ್ದೇಶದ ಮೇಲಿಂದ ಖಾತೆಗಳಿಗೆ ಬೇರೆ ಬೇರೆ ಹೆಸರು ಕೊಡಬೇಕು.** ಉದಾ:— (೧) ನಿಂಗನು ೨ ದುಡ್ಡಿನ ನೀರಲಹಣ್ಣುಗಳನ್ನು ಕೊಂಡನು. ಇಲ್ಲಿ ನಿಂಗನ ಜಮಾಖರ್ಚಿನಲ್ಲಿ ನೀರಲಹಣ್ಣಿನ ಖಾತೆಗೆ ೨ ದುಡ್ಡನ್ನು ಖರ್ಚು ಬರೆಯಬೇಕು. ನಿಂಗನು ರಾಮನಿಗೆ ೨ ದುಡ್ಡಿನ ನೀರಲ ಹಣ್ಣು ತಂದು ಕೊಟ್ಟನು. ಈಗ ನಿಂಗನ ಜಮಾಖರ್ಚಿನಲ್ಲಿ ರಾಮನ ಖಾತೆಗೆ ೨ ದುಡ್ಡನ್ನು ಖರ್ಚು ಬರೆಯಬೇಕಲ್ಲದೆ ನೀರಲ ಹಣ್ಣಿನ ಖಾತೆಗೆ ಖರ್ಚು ಬರೆಯಬಾರದು. ಇವೇ ಹಣ್ಣುಗಳನ್ನೇ ನಿಂಗನು ಬಡವರಿಗೆ ಕೊಟ್ಟಾಗ ೨ ದುಡ್ಡು ಧರ್ಮಾದಾವ

ಬರೆಯುವನು. ಈ ಮೂರೂ ಉದಾಹರಣೆಗಳಲ್ಲಿ ಕೊಂಡದ್ದು ನೀರಲ ಹಣ್ಣಾದರೂ ಆದರ ಬೆಲೆಯು ಮಾಲಕನ ಉದ್ದೇಶಕ್ಕನುಸಾರವಾಗಿ ಬೇರೆ ಬೇರೆ ಖಾತೆಗಳಿಗೆ ಖರ್ಚು ಬೀಳುತ್ತದೆ.

ಪ್ರತಿಯೊಂದು ವ್ಯವಹಾರಕ್ಕೆ ಒಂದೊಂದು ಖಾತೆಯನ್ನು ಹಾಕ ಬಹುದು. ಆದರೆ ಒಂದೇ ತರದ ಹಲವು ವ್ಯವಹಾರಗಳಿದ್ದಾಗ ಅವೆಲ್ಲವು ಗಳಿಗೂ ಬೇರೆ ಬೇರೆ ಖಾತೆಗಳನ್ನು ಹಾಕದೆ ಒಂದೇ ಹೆಸರನ್ನು ಆ ಖಾತೆಗೆ ಕೊಡುವದು ಒಳ್ಳೆಯದು. ಉದಾ:— (೨) ೪ ಆಣೆಯ ಮಾವಿನಹಣ್ಣು ೩ ಆಣೆಯ ಬಾಳಿಯ ಹಣ್ಣು, ಒಂದು ಆಣೆಯ ಪೇರಲಹಣ್ಣು ಕೊಂಡಿದೆ ಇಲ್ಲಿ ಮಾವಿನಹಣ್ಣಿನ ಖಾತೆ, ಬಾಳೆಯಹಣ್ಣಿನ ಖಾತೆ ಎಂದು ಬೇರೆ ಬೇರೆ ಖಾತೆಗಳನ್ನು ಬರೆಯದೆ ಹಣ್ಣಿನ ಖಾತೆ ಎಂದು ಒಂದನ್ನೇ ಬರೆಯುವರು.

ಖಾತೆಗಳ ಹೆಸರುಗಳು ವ್ಯಾಪಾರ ಉದ್ಯೋಗಗಳಿಗೆ ಅನುಸಾರವಾಗಿ ಬೇರೆ ಬೇರೆಯಾಗುತ್ತವೆ. ಉದಾ:— ಖಣದ ವ್ಯಾಪಾರಿಯಾದ ಸಂಗಪ್ಪನು ನಿಂಗಪ್ಪನಿಗೆ ಒಂದು ಬೆಂಗಳೂರ ಖಣವನ್ನು ೨ ರೂಪಾಯಿಗೆ ಮಾರಿದನು. ಇಲ್ಲಿ ಸಂಗಪ್ಪನು ವ್ಯಾಪಾರಿಯಾದ್ದರಿಂದ ಅವನು ತನ್ನ ಜಮಾಖರ್ಚಿನಲ್ಲಿ ಬೆಂಗಳೂರ ಖಣದ ಖಾತೆಗೆ ೨ ರೂಪಾಯಿ ಜಮೆ ಮಾಡುವನು. ಯಾಕೆ? ನಿಂಗಪ್ಪನು ತನ್ನ ಜಮಾಖರ್ಚಿನಲ್ಲಿ ಜವಳಿ ಖಾತೆಗೆ ೨ ರೂಪಾಯಿ ಖರ್ಚು ಬರೆಯುವನು; ಯಾಕೆಂದರೆ, ಅವನಿಗೆ ಅರಿವೆಗಳ ಮೇಲೆ ಒಟ್ಟು ಎಷ್ಟು ಖರ್ಚಾಗಿದೆ ಎಂಬುದು ತಿಳಿಯಬೇಕಾಗಿದೆ.

ಮನೆಯ ಜಮಾಖರ್ಚಿನ ಖಾತೆಗಳು:— ಮನೆಯ ಜಮಾಖರ್ಚು ಇಡಬೇಕಾದರೆ ನಮಗೆ ಬೇಕಾಗುವ ಎಲ್ಲ ಸಾಮಾನುಗಳಿಗೆ ಒಂದೊಂದು ಖಾತೆ ಇಟ್ಟರೆ ಖಾತೆಗಳ ಸಂಖ್ಯೆಯು ಮಿತಿಮೀರಿ ಬೆಳೆಯುವದು. ಮತ್ತು ನಮಗೆ ಬೇಕಾದ ಸಂಗತಿಗಳು ಸುಲಭವಾಗಿ ತಿಳಿಯುವದಿಲ್ಲ. ಆದದರಿಂದ ಜಮಾಖರ್ಚು ಸಣ್ಣ ಮಕ್ಕಳಿಗೆ ಸುಲಭವಾಗಿ ತಿಳಿಯಬೇಕಾದರೆ ಬಹಳ ಖಾತೆಗಳನ್ನು ಹೇಳದೆ ಕೆಳಗೆ ತೋರಿಸಿದಂತೆ ಮುಖ್ಯ ಮುಖ್ಯ ಖಾತೆಗಳನ್ನು ಮಾತ್ರ ಮನೆಯ ಜಮಾಖರ್ಚಿನಲ್ಲಿ ಇಡಲಿಕ್ಕೆ ಕಲಿಸಬೇಕು.

೧ ಖುದ್ದ ಖಾತೆ:— ಪ್ರತಿ ಒಬ್ಬನು ತನ್ನ ಪೂರ್ವಾರ್ಜಿತ ಆಸ್ತಿ ಗಳ ಬೆಲೆಯನ್ನು ಈ ಖಾತೆಗೆ ಜಮೆ ಮಾಡಬೇಕು. ತಾನು ಮಾಡಿದ

ಆಸ್ತಿಯ ಬೆಲೆಯು ಇದರಲ್ಲಿ ಸಮಾವೇಶವಾಗುವದು. ವರ್ಷಾಂತ್ಯಕ್ಕೆ ಉಳಿದ ರಕಮನ್ನು ಇದೇ ಖಾತೆಗೆ ಜಮೆ ಮಾಡಬೇಕು.

೨. ಪಗಾರ ಖಾತೆ:— ನೌಕರಿ ಅಥವಾ ಧಂದೆ ಮಾಡಿ, ಗಳಿಸಿದ ರಕಮನ್ನು ಈ ಖಾತೆಗೆ ಜಮೆ ಮಾಡಬೇಕು.

೩. ಮನೆಯ ಬಾಡಿಗೆ ಖಾತೆ:— ಮನೆಯನ್ನು ಬಾಡಿಗೆಯಿಂದ ಕೊಟ್ಟರೆ ಅದರಿಂದ ಬಂದ ಬಾಡಿಗೆಯ ಹಣವನ್ನು ಈ ಖಾತೆಗೆ ಜಮೆ ಮಾಡಬೇಕು. ಮುನಸಿಪಾಲಿಟಿಯ ನಳಪಟ್ಟಿ, ಕಸಪಟ್ಟಿ ಮುಂತಾದ ಖರ್ಚಿನ ರಕಮನ್ನು ಈ ಖಾತೆಗೆ ಖರ್ಚು ಬರೆಯಬೇಕು.

೪. ಹೊಲದ ಲಾವಣಿ ಖಾತೆ:— ಹೊಲಗಳನ್ನು ಲಾವಣಿಗೆ ಕೊಟ್ಟರೆ ಲಾವಣಿ ರಕಮನ್ನು ಈ ಖಾತೆಗೆ ಜಮೆ ಮಾಡಬೇಕು. ಲಾವಣಿಯಿಂದ ಹಿಡಿದವನ ಹೆಸರಲೆ ಖರ್ಚು ಬರೆಯಬೇಕು. ತರಮು ಕೊಟ್ಟರೆ ಆ ರಕಮನ್ನು ಈ ಖಾತೆಗೆ ಖರ್ಚು ಬರೆಯಬೇಕು.

೫. ಬಡ್ಡಿಯ ಖಾತೆ:— ಇಡುಗಂಟಿನ ಮೇಲಿನ ಬಡ್ಡಿ, ಕ್ಯಾಶ ಸರ್ಟಿಫಿಕೇಟಿನ ಬಡಿ, ಸರಕಾರಿ ಪತ್ರಗಳ ಮೇಲಿನ ಬಡ್ಡಿ, ಠೇವು ಮತ್ತು ಪಾಲಿನ (ಶೇಅರ) ಮೇಲಿನ ಬಡ್ಡಿ, ಸಾಲವಾಗಿ ಕೊಟ್ಟ ಹಣದ ಬಡ್ಡಿ ಇವುಗಳನ್ನು ಇದೇ ಖಾತೆಗೆ ಜಮೆ ಮಾಡಬೇಕು.

೬. ಇತರ ಉತ್ಪನ್ನ ಖಾತೆ:— ತಂದೆ, ತಾಯಿ, ಅಣ್ಣ, ತಮ್ಮ ಆಪ್ತ-ಇಷ್ಟರು ಇವರಿಂದ ಬಂದ ಅಹೇರು ಮುಂತಾದ ತಿರುಗಿ ಕೊಡದಂಥ ರಕಮನ್ನು ಅವರ ಖಾತೆಗಳಿಗೆ ಜಮೆ ಮಾಡದೆ ಈ ಖಾತೆಗೆ ಜಮೆ ಬರೆಯ-ಬೇಕು. ತಿರುಗಿ ಕೊಡುವಂಥ ರಕಮು ಬಂದರೆ ಅವರವರ ಹೆಸರಿನ ಖಾತೆಗೆ ಜಮೆ ಮಾಡಬೇಕು.

೭. ಊಟದ ಖರ್ಚಿನ ಖಾತೆ:— ಊಟಕ್ಕೆ ಬೇಕಾಗುವ ಎಲ್ಲ ಸಾಮಾನುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು. ಉದಾ: — ಧಾನ್ಯ, ಕಿರಾಣಿ ಸಾಮಾನು, ಹೈನ, ಕಾಯಿಪಲ್ಲೆ, ಉರವಲ ಮುಂತಾದವುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು. ಮೊದಲು ಊಟದ ಖರ್ಚಿನ ಖಾತೆ ಒಂದನ್ನೇ ಇಟ್ಟು ಮುಂದೆ ಅವಶ್ಯ ಕಂಡಂತೆ ಮೇಲೆ ಹೇಳಿದ ಪ್ರತಿಯೊಂದಕ್ಕೂ ಒಂದೊಂದು ಖಾತೆಯನ್ನು ಹಾಕಬಹುದು.

೮. **ಕಿರುಕೊಳ ಖರ್ಚಿನ ಖಾತೆ:—** ಅರಿಸಿನ, ಕುಂಕುಮ, ಬಳೆ, ಕಾರ್ಡ, ಪಾಕೀಟು, ಕಸಬರಿಗೆ, ಬುಟ್ಟಿ ಮುಂತಾದ ಸಾಮಾನುಗಳ ಬೆಲೆಯನ್ನೂ ಏನೆ–ಬಾಡಿಗೆ (ಸ್ವಲ್ಪವಿದ್ದರೆ) ಬಟ್ಟೆ ಒಗೆಯುವದು, ಕ್ಷೌರ, ಮುಸುರೆ ತಿಕ್ಕುವದು ಮುಂತಾದ ಆವಶ್ಯಕ ಬಾಬುಗಳಿಗಾಗಿ ಖರ್ಚಾಗುವ ಹಣವನ್ನೂ ಈ ಖಾತೆಗೆ ಖರ್ಚು ಬರೆಯಬೇಕು.

೯. **ಇತರ ಖರ್ಚಿನ ಖಾತೆ:—** ರೇಲ್ವೆ, ನಾಟಕ, ಸಿನೇಮಾ, ಸರ್ಕಸ, ಅನಾಥ ಬಾಲಕಾಶ್ರಮ ಇಲ್ಲವೆ ಯಾವದಾದರೊಂದು ಸಂಸ್ಥೆ, ಮೋಟಾರ ಬಾಡಿಗೆ, ಟಾಂಗಾ ಬಾಡಿಗೆ, ಅಹೇರು, ಪ್ರವಾಸ, ಯಾತ್ರೆ ದಾನಧರ್ಮ ಮುಂತಾದವುಗಳ ಬಗ್ಗೆ ಆದ ಖರ್ಚಿನ ರಕಮನ್ನು ಈ ಖಾತೆಗೆ ಖರ್ಚು ಬರೆಯಬೇಕು.

೧೦. **ಜವಳಿ ಖಾತೆ:—** ಪ್ರಪಂಚಕ್ಕೆ ಬೇಕಾಗುವ ಎಲ್ಲ ಅರಿವೆಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು.

೧೧. **ಇತರ ಸಾಮಾನಿನ ಖಾತೆ:—** ಆಟದ ಸಾಮಾನುಗಳು, ಕನ್ನಡಿ, ಜಮಖಾನೆ, ಗುಡಾರ, ಚಿತ್ರ, ಗಾದಿ, ಪುಸ್ತಕ, ಖುರ್ಚಿ, ಮೇಜು, ಕಪಾಟು, ಮಣಿ, ಪಲ್ಲಂಗ, ಸತಾರ, ತಂಬೂರಿ, ರಾಗದ ಪೆಟ್ಟಿಗೆ, ಸಾಯಕಲ್, ಮೋಟಾರ, ಗ್ರಾಮಫೋನ ಮುಂತಾದ ಸಾಮಾನುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು.

೧೨. **ಭಾಂಡಿ ಸಾಮಾನಿನ ಖಾತೆ:—** ಮನೆಗೆ ಬೇಕಾಗುವ ಎಲ್ಲ ಭಾಂಡಿಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು.

೧೩. **ದಾಗೀನೆ ಖಾತೆ:—** ಬಂಗಾರ, ಬೆಳ್ಳಿ, ಮುತ್ತು ಮುಂತಾದ ಆಭರಣಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು. ಇವುಗಳಲ್ಲಿ ಯಾವದಾದರೊಂದು ಸಾಮಾನು ಮಾರಿದರೆ, ಬಂದ ರಕಮನ್ನು ಈ ಖಾತೆಗೆ ಜಮೆ ಹಿಡಿಯಬೇಕು.

೧೪. **ಮನೆಯ ಖಾತೆ:—** ಮನೆಯನ್ನು ಕೊಂಡರೆ ಅಥವಾ ಸ್ವಂತ ಮಾಲಕಿಯದು ಇದ್ದರೆ ಅದರ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು.

೧೫. **ಹೊಲದ ಖಾತೆ:--** ಹೊಲಗಳನ್ನು ಕೊಂಡರೆ ಇಲ್ಲವೆ ಸ್ವಂತ ಮಾಲಕಿಯ ಹೊಲಗಳಿದ್ದರೆ ಅವುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು. ಮಾರಿದ ಹೊಲಗಳ ಬೆಲೆಯನ್ನು ಇದೇ ಖಾತೆಗೆ ಜಮೆ ಮಾಡಬೇಕು. ಹೊಲದ ದುರಸ್ತಿ, ನಟ್ಟು ಕಡಿಸಲಿಕ್ಕೆ ಅಥವಾ ಒಡ್ಡು ಹಾಕಿಸಲಿಕ್ಕೆ ಇಲ್ಲವೆ ಮತ್ತೆ ಯಾವದೇ ರೀತಿಯಿಂದ ಮಾಡಿದ ಖರ್ಚಿನ ಹಣವನ್ನು ಈ ಖಾತೆಗೆ ಖರ್ಚು ಬರೆಯಬೇಕು.

೧೬. **ಸಾಹುಕಾರಿಕೆ ಖಾತೆಗಳು :—** ಯಾರಿಗಾದರೂ ಸಾಲ ಕೊಟ್ಟರೆ ಆ ರಕಮನ್ನು ಅವರ ಖಾತೆಗೆ ಖರ್ಚು ಬರೆಯಬೇಕು. ತಿರುಗಿ ಬಂದಾಗ ಅವರ ಖಾತೆಗೆ ಜಮೆ ಬರೆಯಬೇಕು. ಇದರಂತೆ ಕ್ಯಾಶ ಸರ್ಟಿಫಿಕೇಟು, ಶೇಅರು, ಮೊದಲಾದವುಗಳನ್ನು ಕೊಂಡರೆ ಆ ಆ ಹೆಸರಿನ ಖಾತೆಗಳಿಗೆ ಖರ್ಚು ಬರೆಯಬೇಕು. ಮಾರಿದರೆ ಅವೇ ಖಾತೆಗಳಿಗೆ ಜಮೆ ಮಾಡಬೇಕು.

೧೭. **ಸಾಲದ ಖಾತೆಗಳು :—** ಯಾರ ಕಡೆಯಿಂದಾದರೂ ಸಾಲ ತೆಗೆದುಕೊಂಡರೆ ಆ ರಕಮನ್ನು ಅವರ ಖಾತೆಗೆ ಜಮೆ ಬರೆಯಬೇಕು. ತಿರುಗಿ ಕೊಟ್ಟರೆ ಆ ರಕಮನ್ನು ಅವರ ಖಾತೆಗೆ ಖರ್ಚು ಬರೆಯಬೇಕು.

(ಡ) **ತಪಶೀಲು :—** ವ್ಯವಹಾರದ ವಿಶೇಷ ವರ್ಣನೆಗೆ ತಪಶೀಲು ಅನ್ನುವರು.

ಈ ನಾಲ್ಕು ಸಂಗತಿಗಳಲ್ಲಿ ರಕಮು ಎಂಬುದು ಜಮಾಖರ್ಚಿನಲ್ಲಿ ಮಹತ್ವದ್ದಿರುವದರಿಂದ ಅದನ್ನು ಹೆಚ್ಚು ವಿವೇಚಿಸಿದೆ.

**ರಕಮು :—** ರಕಮುಗಳಲ್ಲಿ ಎರಡು ಪ್ರಕಾರಗಳು :—(೧) ರೋಖ (೨) ಪರಭಾರೆ, ಅಥವಾ ಜಮಾಖರ್ಚಿ.

(೧) **ರೋಖು :--** ವ್ಯವಹಾರದಿಂದ ಪ್ರತ್ಯಕ್ಷ ರಕಮು ಬಂದರೆ ಅಥವಾ ಹೋದರೆ ಅದಕ್ಕೆ ರೋಖು ರಕಮು ಅನ್ನುವರು.

ಉದಾ :—(೧) ರಾಮಪ್ಪನು ಶಿವಪ್ಪನಿಗೆ ೧೦೦ ರೂ. ಕೈಗಡ ಕೊಟ್ಟನು. (ರಾಮಪ್ಪನಲ್ಲಿ ಆದ) ವ್ಯವಹಾರದ ಪರಿಣಾಮ :— ೧೦೦ ರೂಪಾಯಿಗಳು ರಾಮಪ್ಪನಿಂದ ಶಿವಪ್ಪನಿಗೆ ಹೋದವು. ರಕಮು—೧೦೦ ರೂ. ; ಖಾತೆ—ಶಿವಪ್ಪನದು. ತಪಶೀಲು—೧೦೦ ರೂ. ಗಳನ್ನು ಕೈಗಡ ಕೊಟ್ಟದೆ.

ಉದಾ :— (೨) ರಾಮಪ್ಪನು ೨ ತೊಲೆ ಬಂಗಾರವನ್ನು ತೊಲೆಗೆ ೫೦ ರೂ. ಪ್ರಕಾರ ಮಾರಿದನು.

ಇಲ್ಲಿ ಒಂದು ವ್ಯವಹಾರವಿರುತ್ತದೆ. ಇದರ ಪರಿಣಾಮ:— ೧೦೦ ರೂ. ಗಳು ಬಂಗಾರ ಮಾರಿ ಬಂದದ್ದು; ರಕಮು:-೧೦೦ ರೂ; ಖಾತೆ:- ಬಂಗಾರದ್ದು ತಪಶೀಲು:— ಬಂಗಾರ ತೊಲೆ ೨, ದರ ೫೦ ರೂ ಪ್ರ. ಮಾರಿತು.

(೨) ಪರಭಾರೆ :— ಎರಡು ವ್ಯವಹಾರಗಳ ರಕಮುಗಳು ಸರಿಯಾಗಿಯೂ, ಪರಿಣಾಮಗಳು ವಿರುದ್ಧವಾಗಿಯೂ, ಖಾತೆಗಳು ಭಿನ್ನವಾಗಿಯೂ ಇದ್ದರೆ ಆ ರಕಮಿಗೆ ಪರಭಾರೆ (ಜಮಾಖರ್ಚಿ) ಅನ್ನುವರು. ಇಂಥ ವ್ಯವಹಾರಗಳಿಂದ ರೋಖು ಶಿಲಕಿನಲ್ಲಿ ಹೆಚ್ಚು ಕಡಿಮೆಯಾಗುವದಿಲ್ಲ. ರೋಖು ಶಿಲಕಿನಲ್ಲಿ ಹೆಚ್ಚು ಕಡಿಮೆಯಾಗದೆ ವ್ಯವಹಾರಗಳಾದರೆ ಅವುಗಳ ರಕಮುಗಳು ಪರಭಾರೆ ಇರುತ್ತವೆ.

ಉದಾ :—(೩) ರಾಮಪ್ಪನು ಶಿವಪ್ಪನಿಗೆ ೧೦೦ ರೂ. ಗಳಿಗೆ ಬಂಗಾರ ತೊಲೆ ೨, ದರ ೫೦ ರೂ. ಪ್ರ. ಉದ್ದರಿ ಮಾರಿದನು.

ಇಲ್ಲಿ ಎರಡು ವ್ಯವಹಾರಗಳಿರುವವು. (೧) ರಾಮಪ್ಪನು ಶಿವಪ್ಪನಿಗೆ ೧೦೦ ರೂ. ಕೈಗಡ ಕೊಟ್ಟನು. (೨) ರಾಮಪ್ಪನು ೨ ತೊಲೆ ಬಂಗಾರವನ್ನು ತೊಲೆಗೆ ೫೦ ರೂ. ಪ್ರ. ಮಾರಿದನು. ಇವುಗಳ ಜಮಾಖರ್ಚನ್ನು ರಾಮಪ್ಪನು ಮಾಡಬೇಕಾದರೆ :— ಮೊದಲನೆಯ ವ್ಯವಹಾರದ ಪರಿಣಾಮ :— ೧೦೦ ರೂಪಾಯಿಗಳನ್ನು ಶಿವಪ್ಪನಿಗೆ ಕೈಗಡ ಕೊಟ್ಟನು. ರಕಮು :— ೧೦೦ ರೂ ಖಾತೆ:-ಶಿವಪ್ಪನದು; ತಪಶೀಲು:-೧೦೦ ರೂ. ಗಳನ್ನು ಕೈಗಡ ಕೊಟ್ಟನು.

ಎರಡನೆಯ ವ್ಯವಹಾರದ ಪರಿಣಾಮ :-೧೦೦ ರೂ. ಜಮೆ; ರಕಮು-೧೦೦ ರೂ; ಖಾತೆ :—ಬಂಗಾರದ್ದು; ತಪಶೀಲು:-ಬಂಗಾರ ತೊಲೆ ೨, ದರ ೫೦ ರೂ. ಪ್ರಕಾರ ಶಿವಪ್ಪನಿಗೆ ಮಾರಿತು.

ಮೇಲಿನ ಎರಡು ಉದಾಹರಣೆಗಳಲ್ಲಿ ಇವೇ ವ್ಯವಹಾರಗಳು ಬೇರೆ ಬೇರೆಯವರ ಕೂಡ ಆಗಿರುತ್ತವೆ ಮೂರನೆಯ ಉದಾಹರಣೆಯಲ್ಲಿ ಒಬ್ಬನ ಕೂಡ ಎರಡು ವ್ಯವಹಾರಗಳಾಗಿರುತ್ತವೆ:— ಒಂದು ಸಾಲ ಕೊಟ್ಟದ್ದು, ಮತ್ತೊಂದು ಬಂಗಾರದ ವಿಕ್ರಿ. ಪ್ರತಿಯೊಂದರ ರಕಮು:— ೧೦೦ ರೂ ಇರುತ್ತದೆ; ಸಾಲ-ರೂ. ೧೦೦; ಬಂಗಾರದ ವಿಕ್ರಿ (ತೊಲೆ ೨ ದರ ೫೦ ರೂ.

ಪ್ರ.) ೧೦೦ ರೂ. ಈ ವ್ಯವಹಾರಗಳ ಪರಿಣಾಮಗಳು ವಿರುದ್ಧವಿರುತ್ತವೆ:—ಮೊದಲನೆಯ ವ್ಯವಹಾರದಿಂದ ಸಾಲರೂಪವಾಗಿ ಹೋದ ೧೦೦ ರೂ. ಗಳು ಎರಡನೆಯ ವ್ಯವಹಾರದಲ್ಲಿ ಭಂಗಾರದ ವಿಕ್ರಯಿಂದ ಬಂದವು. ಆದದರಿಂದ ರಾಮಪ್ಪನ ರೋಖು ಶಿಲಕಿನಲ್ಲಿ ಹೆಚ್ಚು ಕಡಿಮೆಯಾಗಲಿಲ್ಲ. ಮತ್ತು ಇವುಗಳ ಖಾತೆಗಳು ಭಿನ್ನವಾಗಿರುತ್ತವೆ:—ಒಂದು ಶಿವಪ್ಪನದು, ಮತ್ತೊಂದು ಬಂಗಾರದ್ದು. ಆದುದರಿಂದ ಈ ರಕಮು ಪರಭಾರೆ ಇರುತ್ತದೆ.

ರಕಮು ಪರಭಾರೆ ಇದ್ದರೆ ಸರಿಯಾದ ರಕಮುಗಳ ಎರಡು ವ್ಯವಹಾರಗಳೂ ಅವುಗಳ ಪರಿಣಾಮಗಳೂ ವಿರುದ್ಧವೂ ಖಾತೆಗಳು ಭಿನ್ನವೂ ಇರಲಿಕ್ಕೆ ಬೇಕು. ಇದರಂತೆ ಉದ್ದರೀ ವ್ಯವಹಾರಗಳ ರಕಮುಗಳು ಯಾವಾಗಲೂ ಪರಭಾರೆ ಇರುತ್ತವೆ.

ಉದಾ:—(೪) ಹನುಮಂತಪ್ಪನು ನಮ್ಮ ಕಡೆಯಿಂದ ೧ ರುಮಾಲಕ್ಕೆ ೨೦ ರೂ. ಪ್ರ. ೧೫ ರುಮಾಲಗಳನ್ನು ಕೊಂಡು ೨೦೦ ರೂ. ಗಳನ್ನು ರೋಖು ಕೊಟ್ಟನು.

ಇಲ್ಲಿ ಎರಡು ಖಾತೆಗಳಾದವು. (೧) ಜವಳಿಯ ಖಾತೆ (೨) ಹನುಮಂತಪ್ಪನ ಖಾತೆ, ೧ನೆಯ ಖಾತೆಯ ವ್ಯವಹಾರದ ಪರಿಣಾಮ ೩೦೦ ರೂ. ಜಮೆ; ರಕಮು-೩೦೦ ರೂ. ಖಾತೆ-ಜವಳಿಯದು; ತಪಶೀಲು:—ರುಮಾಲ ೧೫, ದರ ೨೦ ರೂ. ಪ್ರ. ಹನುಮಂತಪ್ಪನಿಗೆ ಕೊಟ್ಟದೆ. ೨ನೆಯ ವ್ಯವಹಾರದ ಪರಿಣಾಮ—೧೦೦ ರೂ. ಖರ್ಚು; ರಕಮು:—೧೦೦ ರೂ; ಖಾತೆ—ಹನುಮಪ್ಪನದು; ತಪಶೀಲು—

೩೦೦ ರೂ. ರುಮಾಲ ೧೫, ದರ ೨೦ ರೂ. ಪ್ರ.
೨೦೦ ರೂ. ರೋಖು ಬಂದದ್ದು.
೧೦೦ ರೂ. ಬಾಕಿ ಬರತಕ್ಕದ್ದು.

೫. ವ್ಯವಹಾರಗಳ ಬರೆಹದ ರೀತಿ:–ವ್ಯವಹಾರಗಳ ಪರಿಣಾಮಗಳಲ್ಲಿ ಜಮೆ ಮತ್ತು ಖರ್ಚು ಎಂದು ಎರಡು ವಿಧಗಳಿದ್ದದರಿಂದ ವ್ಯವಹಾರಗಳನ್ನು ಬರೆಯುವ ಕಾಗದಗಳನ್ನು ಎರಡು ಭಾಗಗಳಾಗುವಂತೆ ಮಡಿಚ-

ಬೇಕು. ಎಡಗಡೆಯ ಮತ್ತು ಬಲಗಡೆಯ ಭಾಗಗಳ ಪ್ರಾರಂಭದಲ್ಲಿ ಅನು-ಕ್ರಮವಾಗಿ ಜಮೆ ಮತ್ತು ಖರ್ಚು ಎಂದು ಬರೆದು ಅದರ ಮುಂದೆ ಆ ಭಾಗ-ಗಳ ಅಂಚಿನ ವರೆಗೆ ಒಂದೊಂದು ಗೆರೆಯನ್ನು ಎಳೆದು ಅದರ ಮುಂದೆ ರೂ. ಎಂದು ಬರೆಯಬೇಕು. ಏಕೆಂದರೆ ನಮ್ಮ ವ್ಯವಹಾರಗಳೆಲ್ಲ ರೂಪಾಯಿ ಗಳಲ್ಲಿ ನಡೆಯುತ್ತವೆ. ಪ್ರತಿಯೊಂದು ಭಾಗದಲ್ಲಿ ಪುನಃ ನಾಲ್ಕು ಭಾಗ ಗಳನ್ನು ಮಾಡಬೇಕು. ರಕಮು ಸ್ಪಷ್ಟವಾಗಿ ತಿಳಿಯುವದರ ಸಲುವಾಗಿ ಮೊದಲನೆಯ ಮನೆಯಲ್ಲಿ ರಕಮು ಬರೆಯಬೇಕು. ೨ನೆಯ, ೩ನೆಯ, ಮತ್ತು ೪ನೆಯ ಮನೆಗಳಲ್ಲಿ ಖಾತೆಯನ್ನೂ ತಪಶೀಲನ್ನೂ ಬರೆದು ಖಾ. ಪಾ. (ಖಾತೆಯ ಪಾನು) ಪಾ. ನಂ. (ಪಾವತಿಯ ನಂಬರು) ಗಳನ್ನು ಬರೆಯಬೇಕು. ಅದರ ಕೆಳಗೆ ಹೀಗೆ══════════ಜೋಡು ಗೆರೆಗಳನ್ನು ಎಳೆಯಬೇಕು.

ಉದಾ:—(೧) ೧೮ ರೂ. ಗಳಿಗೆ ನಾಲ್ಕು ಮಣಗಳಂತೆ ೨೦ ಮಣ ಜೋಳವನ್ನು ರೋಖು ಮಾರಿದೆ.

ಇಲ್ಲಿ ಒಂದು ವ್ಯವಹಾರವಿರುವದು. ಇದರ ಪರಿಣಾಮ—೯೦ ರೂ. ಜಮೆ, ರಕಮು—೯೦ ರೂ. ಖಾತೆ—ಜೋಳದ್ದು; ತಪಶೀಲು—೨೦ ಮಣ ಜೋಳ ೧೮ ರೂ. ಗಳಿಗೆ ೪ ಮಣಗಳ ಪ್ರ.

ಜಮೆ———————— ರೂ. ಖರ್ಚು ———————— ರೂ.

೯೦ ಜೋಳದ ಖಾತೆ:—
ಜೋಳ ಮಣ ೨೦ ದರ ೧೮ ರೂ.
೪ ಮಣಗಳ ಪ್ರಕಾರ ರೋಖು
ಮಾರಿದೆ.
ಖಾ. ಪಾ. ಪಾ. ನಂ.

ಉದಾ:— (೨) ಸಂಗಪ್ಪನು ರಾಮರಾಯರಿಗೆ ಕೆಳಗಿನ ಸಾಮಾನುಗಳನ್ನು ಉದ್ದರಿ ಮಾರಿದನು.

೩೦. ರೂ. ಧೋತರ ಜೋಡು ೫, ದರ ೬ ಪ್ರ., ೭೨ ರೂ. ಕೋಟಿನ ಅರಿವೆ ವಾರ ೮, ದರ ೯ ರೂ. ಪ್ರ., ೫೦ ರೂ. ಸೀರೆ ೨ ದರ ೨೫ ರೂ. ಪ್ರ. ೧೦೦ ರೂ. ಬಂಗಾರ ತೊಲೆ ೨, ದರ ೫೦ ರೂ. ಈ ವ್ಯವಹಾರಗಳನ್ನು ಇಬ್ಬರಲ್ಲಿಯೂ ಬರೆದು ತೋರಿಸಿರಿ.

ವ್ಯಾಪಾರಿ ಸಂಗಪ್ಪನ ಜಮಾಖರ್ಚಿನಲ್ಲಿ ೫ ಖಾತೆಗಳಿರುವವು. ಅವುಗಳಲ್ಲಿ ನಾಲ್ಕರ ಪರಿಣಾಮವು ಜಮೆ. ಐದನೆಯದರ ಪರಿಣಾಮವು ಖರ್ಚು. ಧೋತರ, ಕೋಟಿನ ಅರಿವೆ, ಸೀರೆ, ಬಂಗಾರ ಇವು ಮಾರಿದವು; ಮತ್ತು ಇವುಗಳ ಬೆಲೆಯು ರಕಮು (೪೦+೭೨+೫೦+೧೦೦=) ೨೬೨ ರೂಪಾಯಿಗಳನ್ನು ರಾಮರಾಯರಿಗೆ ಸಾಲ ಕೊಟ್ಟಂತಾಯಿತು.

**ಜಮೆ —— ರೂ.**

೪೦ ಧೋತರ ಖಾತೆ:—
ಧೋತರ ಜೋಡು ೫, ದರ ೮ ರೂ. ಪ್ರ. ರಾಮರಾಯರಿಗೆ ಉದ್ರಿ ಕೊಟ್ಟದ್ದರಿಂದ ಅವರ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

೭೨ ಕೋಟಿನ ಅರಿವೆಯ ಖಾತೆ:-
ಕೋಟಿನ ಅರಿವೆ ವಾರ ೮, ದರ ೯ ರೂ. ಪ್ರ. ರಾಮರಾಯರಿಗೆ ಉದ್ದರಿ ಕೊಟ್ಟದ್ದರಿಂದ ಅವರ ಖಾತೆಗೆ ಖರ್ಚು.
ಖಾ. ಪಾ. ಪಾ ನಂ.

೫೦ ಸೀರೆಯ ಖಾತೆ:—
ಸೀರೆ ೨, ದರ ೨೫ ರೂ. ಪ್ರ. ರಾಮರಾಯರಿಗೆ ಉದ್ದರಿ ಕೊಟ್ಟದ್ದರಿಂದ ಅವರ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

೧೦೦ ಬಂಗಾರ ಖಾತೆ:—
ಬಂಗಾರ ತೊಲೆ ೨, ದರ ೫೦ ರೂ. ಪ್ರ. ರಾಮರಾಯರಿಗೆ ಉದ್ದರಿ ಕೊಟ್ಟದ್ದರಿಂದ ಅವರ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

**ಖರ್ಚು —— ರೂ.**

೨೬೨ ರಾಮರಾಯರ ಖಾತೆ:—
ಇವರು ನಮ್ಮಲ್ಲಿ ಉದ್ದರಿ ಸಾಮಾನುಗಳನ್ನು ಒಯ್ದ ತಪಶೀಲು:-
೪೦ ರೂ. ಧೋತರ ಜೋಡು ೫, ದರ ೮ ರೂ. ಪ್ರ.
೭೨ ರೂ. ಕೋಟಿನ ಅರಿವೆ ವಾರ ೮, ದರ ೯ ರೂ. ಪ್ರ.
೫೦ ರೂ. ಸೀರೆ ೨, ದರ ೨೫ ರೂ. ಪ್ರ.
೧೦೦ ರೂ. ಬಂಗಾರ ತೊಲೆ ೨, ದರ ೫೦ ರೂ. ಪ್ರ.
೨೬೨ ಆ ಆ ಖಾತೆಗಳಿಗೆ ಜಮೆ.
ಖಾ. ಪಾ. ಪಾ. ನಂ.

ರಾಮರಾಯರು ಧೋತರ, ಕೋಟಿನ ಅರಿವೆ, ಸೀರೆ ಇವುಗಳ ಖಾತೆಗಳನ್ನು ಬೇರೆ ಬೇರೆಯಾಗಿಡದೆ ಜವಳಿ (ಅರಿವೆ)ಯ ಖಾತೆಯೊಂದನ್ನೇ ಇಡುವದರಿಂದ

ಮೂರು ಖಾತೆಗಳಾಗುವವು. ಇವುಗಳ ರಕಮುಗಳು ಮೂರು; ಜಮೆಯ ಕಡೆಗೆ ಒಂದು, ಖರ್ಚಿನ ಕಡೆಗೆ ಎರಡು. ಹೇಗಂದರೆ—

**ಜಮೆ — ರೂ.**

೨೫೨ ಸಂಗಪ್ಪನ ಖಾತೆ:—

ತಪಶೀಲು:—

೩೦ ರೂ. ಧೋ. ಜೋಡು ೫, ದರ ೬ ರೂ. ಪ್ರ.

೭೨ ರೂ. ಕೋಟಿನ ಅರಿವೆ ವಾರ ೮, ದರ ೯ ರೂ. ಪ್ರ.

೫೦ ರೂ. ಸೀರೆ ೨, ದರ ರೂ. ೨೫ ಪ್ರ.

೧೦೦ ರೂ. ಬಂಗಾರ ತೊಲೆ ೨ ದರ ೫೦ ರೂ. ಪ್ರ.

೨೫೨ ಅಂತೂ ಉದ್ದರಿ ತಂದದ್ದರಿಂದ ಆ ಆ ಖಾತೆಗಳಿಗೆ ಖರ್ಚು

ಖಾ. ಪಾ. ಪಾ. ನಂ.

**ಖರ್ಚು — ರೂ.**

೧೫೨ ಜವಳಿ (ಅರಿವೆ)ಯ ಖಾತೆ:—

ತಪಶೀಲು:—

೩೦ ರೂ. ಧೋ. ಜೋಡು ೫, ದರ ೬ ರೂ. ಪ್ರ.

೭೨ ರೂ. ಕೋಟಿನ ಅರಿವೆ ವಾರ ೮, ದರ ೯ ರೂ. ಪ್ರ.

೫೦ ರೂ. ಸೀರೆ ೨, ದರ ೨೫ ರೂ. ಪ್ರ.

೧೫೨ ಅಂತೂ ಸಂಗಪ್ಪನಲ್ಲಿ ಉದ್ರಿ ತಂದದ್ದರಿಂದ ಅವನ ಖಾತೆಗೆ ಜಮೆ,

ಖಾ. ಪಾ. ಪಾ. ನಂ.

೧೦೦ ಬಂಗಾರ ಖಾತೆ:—

ಬಂಗಾರ ತೊಲೆ ೨, ದರ ೫೦ ರೂ. ಪ್ರ. ಸಂಗಪ್ಪನಲ್ಲಿ ಉದ್ದರಿ ತಂದದ್ದರಿಂದ ಅವನ ಖಾತೆಗೆ ಜಮೆ.

ಖಾ. ಪಾ. ಪಾ. ನಂ.

ಉದಾ:— (೩) ನಾಗಪ್ಪನು ಮನೆಯ ಖರ್ಚಿನ ಸಲುವಾಗಿ ೫೦೦ ರೂ. ಗಳನ್ನು ತೆಗೆದಿಟ್ಟನು.

ಇಲ್ಲಿ ರೋಖು ಶಿಲಕಿನಲ್ಲಿ ಹೆಚ್ಚು ಕಡಿಮೆಯಾಗಿಲ್ಲ. ಇದರ ರಕಮು-ಪರಭಾರೆ ಇರಲಿಕ್ಕೆ ಬೇಕು. ಆದುದರಿಂದ ಸರಿಯಾದ ರಕಮಿನ, ವಿರುದ್ಧ ಪರಿಣಾಮಗಳುಳ್ಳ ಎರಡು ವ್ಯವಹಾರಗಳು ನಡೆದಿರುತ್ತವೆ. ನಾಗಪ್ಪನ ಖಾತೆಯಿಂದ ೫೦೦ ರೂ. ಖರ್ಚಾದವು. ಮನೆಯ ಖರ್ಚು ಖಾತೆಗೆ ೫೦೦ ರೂ. ಜಮೆಯಾದವು. ಇವುಗಳ ಪರಿಣಾಮಗಳು—೫೦೦ ರೂ. ನಾಗಪ್ಪನ ಖಾತೆಗೆ ಖರ್ಚು. ಮನೆಯ ಖರ್ಚು ಖಾತೆಗೆ ಜಮೆ; ರಕಮು-೫೦೦ ರೂ. ಖಾತೆಗಳು—ನಾಗಪ್ಪನದು, ಮತ್ತು ಮನೆಯ ಖರ್ಚು; ತಪಶೀಲು—ನಾಗಪ್ಪನು ಮನೆಯ ಖರ್ಚಿನ ಸಲುವಾಗಿ ತೆಗೆದಿಟ್ಟನು.

| ಜಮೆ ———— ರೂ. | ಖರ್ಚು ———— ರೂ. |
|---|---|
| ೬೦೦ ಮನೆಯ ಖರ್ಚಿನ ಖಾತೆ:— | ೫೦೦ ನಾಗಪ್ಪನ(ಖುದ್ದ) ಖಾತೆ:— |
| ಮನೆಯ ಖರ್ಚಿನ ಸಲುವಾಗಿ ನಾಗಪ್ಪನು ತೆಗೆದಿಟ್ಟದ್ದರಿಂದ ಅವನ ಖಾತೆಗೆ ಖರ್ಚು. | ಮನೆಯ ಖರ್ಚಿಗೆ ತೆಗೆದಿಟ್ಟದ್ದ-ರಿಂದ ೪ ಖಾತೆಗೆ ಜಮೆ. |
| ಖಾ. ಪಾ. ಪಾ. ನಂ. | ಖಾ. ಪಾ. ಪಾ. ನಂ. |

೬. ಪ್ರಶ್ನಗಳು:-

೧ ಜಮಾಖರ್ಚು ಅಂದರೇನು? ಅದರಲ್ಲಿ ಮುಖ್ಯ ಭಾಗಗಳೆಷ್ಟು? ಯಾವವು?

೨ ವ್ಯವಹಾರವೆಂದರೇನು? ಉದಾಹರಣೆಯನ್ನು ಕೊಡಿರಿ.

೩ ವ್ಯವಹಾರದಲ್ಲಿ ಮುಖ್ಯವಾದ ನಾಲ್ಕು ಸಂಗತಿಗಳು ಯಾವವು?

೪ ವ್ಯವಹಾರದ ಪರಿಣಾಮ ಮತ್ತು ಖಾತೆ ಅಂದರೇನು?

೫ ಜಮೆ ಮತ್ತು ಖರ್ಚು ಅಂದರೇನು?

೬ ರಕಮುಗಳಲ್ಲಿ ಎಷ್ಟು ಪ್ರಕಾರಗಳು? ಯಾವವು? ರೋಖು ಮತ್ತು ಪರಭಾರೆ ಅಂದರೇನು?

೭ ವ್ಯವಹಾರವನ್ನು ಬರೆಯುವ ಕ್ರಮವನ್ನು ವರ್ಣಿಸಿರಿ.

೭. ಊಟದ ಖಾತೆ, ಜವಳಿ ಖಾತೆ, ಕಿರಕೋಳ ಖಾತೆ, ಇತರ ಖರ್ಚು ಖಾತೆ. ಇವುಗಳಲ್ಲಿ ಯೋಗ್ಯ ಖಾತೆಗಳಿಗೆ ಕೆಳಗಿನ ವ್ಯವಹಾರಗಳನ್ನು ಬರೆಯಿರಿ.

೧ ಬಾಳಿ ಎಲೆ ೪ ಆಣೆಗೆ ತಂದಿದೆ.

೨ ೨ ಅಂಗಿ ೨ ರೂ. ಗೆ ಕೊಂಡಿತು.

೩ ಐದು ಸೇರು ಒಳ್ಳೆ ಎಣ್ಣೆ ೧೫ ಆಣೆಗೆ ಕೊಂಡಿದೆ.

೪ ೫ ರೂ. ತೊಗರಿಬೇಳೆ ಕೊಂಡಿತು.

೫ ೨ ರೂ. ಮನೆಯ ಬಾಡಿಗೆ ಕೊಟ್ಟಿದೆ.

೬ ೧ ಬಾಟ್ಲಿ ಚಿಮಣಿ ಎಣ್ಣೆ ಕೊಂಡಿತು. ೩ ಆ. ೬ ಪೈ.

೭ ಸವತಿಕಾಯಿ ೨ ಆಣೆ, ಚುರಮುರಿ ೨ ಆಣೆ, ಬಾಳೆಹಣ್ಣು ೨ ಆಣೆಯದ್ದು ಕೊಂಡಿದೆ.

೮ ಹಣಿಗೆ ೨ ಆಣೆ, ಬಳೆ ೧೨ ಆಣೆ, ಊಬತ್ತಿ ೧ ಆಣೆ, ಫೇಸ ಪಾವಡರ ೧ ರೂ. ಗೆ ಕೊಂಡಿದೆ.

೯ ಷಟ ೨ ರೂ. ಗೆ, ಸೀರೆ ೨೦ ರೂ. ಗೆ, ೨ ಕರವಸ್ತ್ರಗಳು ೧ ರೂ. ಕೊಂಡಿದೆ.

೧೦ ಕುಂಕುಮ ೮ ೮ ಅಣೆ, ಬಿದಿರ ಬುಟ್ಟಿ ೬ ಅಣೆಗೆ ಕೊಂಡಿದೆ.

೮ ಧಾನ್ಯದ ಖಾತೆ, ಹೈನದ ಖಾತೆ, ಉರವಲ ಖಾತೆ, ಕಾಯಿಪಲ್ಲೆಯ ಖಾತೆ, ಫಲಾಳದ ಖಾತೆ, ಕಿರಾಣಿ ಖಾತೆ,-ಇವುಗಳಲ್ಲಿ ಯೋಗ್ಯ ಖಾತೆಗಳಿಗೆ ಕೆಳಗಿನ ವ್ಯವಹಾರಗಳನ್ನು ಬರೆಯಿರಿ.

೧ ಇದ್ದಲಿ ಚೀಲ ೨, ದರ ೪ ರೂ. ಪ್ರ. ಕೊಂಡಿದೆ.

೨ ೩ ರೂ. ಬೆಣ್ಣೆ ಕೊಂಡಿದೆ. ದರ ೯ ಅಣೆಗೆ ೧ ಶೇರು.

೩ ಟೆಂಗಿನಕಾಯಿ ೩ ದರ ೩ ಅಣೆ ಪ್ರ. ಕ್ಯಾಬೀಜ ೮ ಅಣೆ, ಮೆಣಸಿನಕಾಯಿ ೧ ಅ. ಕೊಂಡಿದೆ.

೪ ೩ ರೂ. ಹೆಸರು, ೨ ರೂ. ಉದ್ದು ೧ ರೂ. ತೊಗರಿಬೇಳೆ, ೧ ರೂ. ಅಲಸಂದಿ, ೧ ರೂ. ಕಡಲೆಬೇಳೆ ಕೊಂಡಿದೆ.

೫ ಹವೀಜ ೮ ಅಣೆ, ಸಾಸವಿ ೪ ಅಣೆ, ಅರಿಸಿಣ ೧೨ ಅಣೆ, ಉತ್ತತ್ತಿ ೪ ಅಣೆ ಯವು ಕೊಂಡಿದೆ.

೬ ಕಬ್ಬು ೨ ಅಣೆ, ಮಾವಿನಹಣ್ಣು ೮ ಅಣೆ, ಮುಸಂಬಿ ೪ ಅಣೆ, ಚುರಮುರಿ ೫ ಅಣೆ, ಪುಠಾಣಿ ೨ ಅಣೆದ್ದು ಕೊಂಡಿದೆ.

೭ ಮೊಸರು ೪ ಅಣೆ, ಹಾಲು ೪ ಅಣೆಯದು ಕೊಂಡಿತು.

೮ ಅವರೆ ೮ ಅಣೆ, ಹೆಸರು ೨ ರೂ. ಉದ್ದು ೧ ರೂ. ಯದು ಕೊಂಡಿದೆ

೯ ೨ ಮಣ ಬೆಲ್ಲ ೮ ರೂ. ಗೆ ಮಾರಿತು.

೧೦ ಕುಳ್ಳು ೮ ಅಣೆ, ಕಟ್ಟಿಗೆ ೪ ರೂ. ಚಕ್ಕೆ ೮ ಅಣೆಯದು ಕೊಂಡಿತು.

೯ ಇತರ ಸಾಮಾನಿನ ಖಾತೆ, ಕಿರಕೊಳ ಖರ್ಚು ಖಾತೆ, ಕಿರಾಣಿ ಖಾತೆ, ಇತರ ಖರ್ಚು ಖಾತೆ, ಇತರ ಉತ್ಪನ್ನ ಖಾತೆ—ಇವುಗಳಲ್ಲಿ ತಕ್ಕ ಖಾತೆಗೆ ಕೆಳಗಿನ ವ್ಯವಹಾರಗಳನ್ನು ಬರೆಯಿರಿ.

೧ ಹಳೆಯ ಸಾಯಕಲ್ಲು ೧೫ ರೂ. ಕೊಂಡಿದೆ.

೨ ಕೇಶರ ೧ ತೊಲೆ ೫ ರೂ. ಗೆ ಕೊಂಡಿದೆ.

೩ ೨ ಪಂಚಾಂಗಗಳನ್ನು ೮ ಅಣೆಗೆ ಕೊಂಡಿದೆ.

೪ ಗಂಗಕ್ಕನು ತನ್ನ ಅಣ್ಣನ ಮಗನಿಗೆ ಅವನ ಜಾವಳದಲ್ಲಿ ೫ ರೂ. ಕೊಟ್ಟಳು.

೫ ೧ ರೂ. ಯ ಅತ್ತರು ಕೊಂಡಿದೆ.

೬ ಹಮಾಲಿ ೧ ಅಣೆ ಕೊಟ್ಟಿತು.

೭ ೧೦ ರೂ. ಯ ರುಮಾಲ ಅಹೇರು ಬಂತು.

೮ ದೀಪದ ಪೆಟ್ಟಿಗೆಗಳಿಗೆ ೯ ಅಣೆ ಕೊಟ್ಟಿದೆ.

೯ ಚಹಾದ ಡಬ್ಬಿಗೆ ೨ ರೂ. ಕೊಟ್ಟಿತು.

೧೦ ೮ ರೂ. ಗೆ ೨ ಗ್ರಾಮೊಫೋನ್ ಪ್ಲೇಟುಗಳನ್ನು ಕೊಂಡಿತು.

೧೦ ದಾಗೀನೆ ಖಾತೆ, ಮನೆಯ ಖಾತೆ, ಇತರ ಸಾಮಾನಿನ ಖಾತೆ, ಹೊಲಗಳ ಖಾತೆ, ಭಾಂಡಿಗಳ ಖಾತೆ, ಬ್ಯಾಂಕಿನ ಖಾತೆ— ಇವುಗಳಲ್ಲಿ ಯೋಗ್ಯ ಖಾತೆಗಳಿಗೆ ಕೆಳಗಿನ ವ್ಯವಹಾರಗಳನ್ನು ಬರೆಯಿರಿ.

೧ ರಾಗದ ಪೆಟ್ಟಿಗೆ ೫೫ ರೂ. ಗೆ, ಕಬ್ಬಿಣ ತೊಟ್ಟಿಲ ೩೬ ರೂ. ಗೆ ಕೊಂಡಿದೆ.

೨ ೮ ಎಕರೆ ಹೊಲ ೨೬೦೦ ರೂ. ಗೆ ಕೊಂಡಿದೆ.

೩ ೫೦ ರೂ. ಬ್ಯಾಂಕಿಗೆ ಕಳಿಸಿದೆ.

೪ ತಾಮ್ರದ ತಪ್ಪೇಲಿ ೬ ರೂ. ಗೆ ಕೊಂಡಿದೆ.

೫ ಬೆಳ್ಳಿಯ ತಂಬಿಗೆ ೬೦ ರೂ. ಗೆ ಕೊಂಡಿದೆ.

೬ ೪ ತೊಲೆಯ ಬಂಗಾರದ ಬಳೆ ೨೬೦ ರೂ. ಗೆ ಮಾರಿದೆ.

೭ ೨ ಒಡಕ ಹಂಡೆಗಳನ್ನು ೨೨ ರೂ. ಗೆ ಮಾರಿದೆ.

೮ ರ್‍ಯಾಲೆ ಸಾಯಕಲ್ಲು ೧೬೦ ರೂ. ಗೆ ಮಾರಿದೆ.

೯ ಮುತ್ತಿನ ಬುಗಡಿ ಜೋಡು ೧೦೦ ರೂ. ಗೆ ಕೊಟ್ಟಿದೆ.

೧೦ ೧ ತೊಲೆ ಬಂಗಾರದ ಗಣಪತಿ ೮೦ ರೂ. ಕೊಂಡಿದೆ.

೧೧ ಮನೆಯ ಬಾಡಿಗೆ ಖಾತೆ, ಇತರ ಸಾಮಾನಿನ ಖಾತೆ, ಪಗಾರ ಖಾತೆ, ಹೊಲದ ಲಾವಣಿ ಖಾತೆ, ಇತರ ಖರ್ಚ ಖಾತೆ, ಕಿರಕೋಳ ಖಾತೆ— ಇವುಗಳಲ್ಲಿ ಯೋಗ್ಯ ಖಾತೆಗಳಿಗೆ ಕೆಳಗಿನ ವ್ಯವಹಾರಗಳನ್ನು ಬರೆಯಿರಿ.

೧ ಅತ್ತರ ೧ ರೂ. ಕಾದಂಬರಿ ೮ ಆ. ಜಯಕರ್ನಾಟಕ ೬ ಆ. ಗೆ ಕೊಂಡಿದೆ.

೨ ೧೫ ರೂ. ಮನೆ ಬಾಡಿಗೆ ಬಂತು.

೩ ೩೫ ರೂ. ಪಗಾರ ಬಂತು. ೧ ಆಣೆ ಟಿಕೀಟು ಹಚ್ಚಿತು.

೪ ಮನೆಗೆ ಸುಣ್ಣ ಹಚ್ಚಲಿಕ್ಕೆ ೭ ರೂ. ಖರ್ಚು ಬಂತು.

೫ ೧೫೦ ರೂ ಹೊಲದ ಲಾವಣಿ ಬಂತು.

೬ ೨೫ ರೂ. ಹೊಲದ ಸರಕಾರಿ ಹಸ್ತೆ ಕೊಟ್ಟಿತು.

೭ ೨೦ ರೂ. ಮನೆಪಟ್ಟಿ ಕೊಟ್ಟಿತು.

೮ ಜನಿವಾರ ೨ ಆಣೆ, ನಾವಲಿಗನಿಗೆ ೪ ಆಣೆ ಅಗಸನಿಗೆ ೨ ರೂ. ಕೊಟ್ಟಿತು.

೯ ಮಲ್ಲಿಗೆ ಹೂ ೨ ಆಣೆ, ದವನ ೧ ಆಣೆ, ಸಿನೇಮಾ ಟಿಕೀಟು ೭ ಆ. ಗೆ ಕೊಂಡಿದೆ.

೧೦ ದಾರ ೧ ಆಣೆ, ಸೂಜಿ ೧ ಆಣೆ, ಪಿನ್ನು ೧ ಆಣೆ, ವೊಳೆ ೨ ಆಣೆ ಈ ಪ್ರಕಾರ ಕೊಂಡಿತು.

೧೨. ಕೆಳಗಿನ ವ್ಯವಹಾರಗಳನ್ನು ಯಾವ ಯಾವ ಖಾತೆಗಳಿಗೆ ಬರೆಯಿರಿ?

೧ ೧ ರೂ. ೪ ಆಣೆಗೆ ಒಂದು ಕಂದೀಲ ಕೊಂಡನು.
೨ ೧೫ ರೂ. ಮ್ಯುನಸಿಪಾಲಿಟಿ ಮನೆಪಟ್ಟಿ ಕೊಟ್ಟನು.
೩ ೫೦ ರೂ. ಪಗಾರ ಬಂತು. ೧ ಆಣೆ, ಪಾವತಿ ಟಿಕೇಟು ಹಚ್ಚಿದನು.
೪ ೮ ಆಣೆಯ ಪಲ್ಲೆ-ಕಾಯಿ ತರಿಸಿದನು.
೫ ೫ ರೂ. ಮಗನ ಶಾಲೆಯ ಫೀ ಹಣ ಕೊಟ್ಟನು.
೬ ೧ ರೂ. ೮ ಆಣೆಯ ಮಾವಿನ ಹಣ್ಣು ಕೊಂಡನು.
೭ ೫ ಆಣೆ ಬೀಸುವವಳಿಗೆ ಕೊಟ್ಟನು.
೮ ೬ ಆ. ಗೆ ಒಂದು ಗ್ಲಾಸು, ೨ ದುಡ್ಡಿಗೆ ಒಂದು ಬತ್ತಿ ತರಿಸಿದನು.
೯ ೧ ಆಣೆ ಕೊಟ್ಟು ಸಂಯುಕ್ತ ಕರ್ನಾಟಕ, ೨ ದುಡ್ಡಿನ ಮಸಿ ಕೊಂಡನು.
೧೦ ಹಿತ್ತಲದೊಳಗಿನ ಹಲಸಿನ ಗಿಡದ ೨೦ ಕಾಯಿಗಳನ್ನು ೫ ರೂ. ಗೆ ಮಾರಿದನು.
೧೧ ೫ ರೂ. ಮಾವಿನ ಹಣ್ಣು ರಾಮರಾಯರು ಕಳಿಸಿದ್ದರಿಂದ ಅವರಿಗೆ ೫ ರೂ. ಗಳನ್ನು ಕೊಟ್ಟನು.
೧೨ ರಂಗರಾಯರಿಗೆ ೪೦ ರೂ. ಬೆಣ್ಣೆ ಕೊಂಡು ಕಳಿಸಿದನು.
೧೩ ಮಗಳ ಪರೀಕ್ಷೆ ಪಾಸಾದ್ದರಿಂದ ೨ ರೂ. ಫೇಡೆ ಹಂಚಿದೆ.
೧೪ ೧೨ ರೂ. ಗೆ ಅಪ್ಪನ ಫೋಟೋ ತಯಾರಿಸಿತು.
೧೫ ೬೦ ರೂ. ಗೆ ದೊಡ್ಡ ಕನ್ನಡಿ ಕೊಂಡಿದೆ.
೧೬ ಮೆಕ್ಕೆ ಸಾಯಿಕುನ್ನಿ ೩ ರೂ. ಗೆ ಕೊಂಡಿದೆ.
೧೭ ೩೫ ರೂ. ಗೆ ಜರದ ಸೀರೆ ಶಂಕರರಾಯರು ಕೊಂಡು ಕಳಿಸಿದರು.
೧೮ ಒಂದು ಸೇರು ಅಕ್ಕಿ ನಮ್ಮ ನಾಗೂ ನೆರೆಮನೆಯಲ್ಲಿ ಕಡ ತಂದಳು.
೧೯ ೧ ರೂ. ದಕ್ಷಿಣೆ ಬಂತು.
೨೦ ೧೫ ರೂ. ಗೆ ಯ ಮಹಾಭಾರತವು ದಾನ ಬಂತು.
೨೧ ಹಿತ್ತಲದೊಳಗಿನ ಜಾಲಿಗಿಡ ೫ ರೂ. ಗೆ ಮಾರಿದನು.
೨೨ ಬೆಳ್ಳಿ ಸರಪಳಿ ಜೋಡು ೨೫ ರೂ. ಗೆ ಮಾರಿದನು.

೧೩. ಕೆಳಗೆ..............ಚಿಹ್ನ ಹಾಕಿದ ಸ್ಥಳದಲ್ಲಿ ಖಾತೆ ಹಾಗೂ ಪರಿಣಾಮ ಇವುಗಳನ್ನು ತುಂಬಿರಿ.

೧ ರಂಗೂಬಾಯಿಯು ವೀರಪ್ಪನಲ್ಲಿ ೫ ರೂ. ಕಿರಾಣಿ ಮಾಲು ಉದ್ರಿ ತಂದಳು. ಇದನ್ನು........ಖಾತೆಗೆ ಖರ್ಚು ಬರೆಯಬೇಕು. ಮತ್ತು .......ಖಾತೆಗೆ ಜಮೆ ಬರೆಯಬೇಕು. (ರಂಗೂಬಾಯಿಯ ಜಮಾಖರ್ಚಿನಲ್ಲಿ)

೨. ಬಸವ್ವನು ೨೦ ರೂ. ಸೀರೆ, ೨ ರೂ. ಖಣ ಮಾರವಾಡಿಯಲ್ಲಿ ಖರೀದಿ ಮಾಡಿ ೧೨ ರೂ. ಕೊಟ್ಟಳು. ಇವನ್ನು .......ಖಾತೆಗೆ ಜಮೆ........ಖಾತೆಗೆ ಖರ್ಚು ಬರೆಯಬೇಕು. (ಇಬ್ಬರಲ್ಲಿ)

೩. ರಾಮರಾಯರ ಜಾಮೀನಿನ ಮೇಲೆ ಸದಾಶಿವರಾವ ಸರಾಫರು ನಾರಾಯಣರಾಯರಿಗೆ ೫೦೦ ರೂ. ಬಂಗಾರ ಕೊಟ್ಟರು. ಇದನ್ನು... ....ಖಾತೆಗೆ........ ಬರೆಯಬೇಕು.........ಖಾತೆಗೆ...............ಬರೆಯಬೇಕು. (ಮೂವರಲ್ಲಿ).

೪. ಅನು ಬನಿಗೆ ಕೊಡತಕ್ಕ ೫೦ ರೂ. ಗಳಿಗೆ ೮ ಮಣ ತೊಗರಿ ಹಾಗು ೫ ರೂ. ಕೊಟ್ಟು ಮುಟ್ಟಿಸಿದನು. ಇದನ್ನು........ಖಾತೆಗೆ ಜಮೆ ಮತ್ತು........ಖಾತೆಗೆ ಖರ್ಚು ಬರೆಯಬೇಕು. (ಇಬ್ಬರಲ್ಲಿ)

೫. ಅನಂತರಾಯರು ರಾಘವೇಂದ್ರರಾಯರಿಗೆ ೧೫ ರೂ. ಗಳನ್ನು ತಿಂಗಳ ಖರ್ಚಿಗೆ ಕಳಿಸಿದರು.

೬. ಶ್ರೀನಿವಾಸನು ಶಂಕರನ ಸಂಗಡ ೫ ರೂ. ಯ ಧೋತರ ಜೋಡನ್ನು ರಂಗನಿಗೆ ಕಳಿಸಿದನು.

೭. ಎಲ್ಲಪ್ಪನು ಜಯರಾಯರಿಗೆ ೮ ಮಣ ಹೆಸರನ್ನು ದರ ೨॥ ರೂ. ಪ್ರಕಾರ ಮತ್ತು ೩೦ ರೂ. ಗಳನ್ನು ರೋಖು ಕೊಟ್ಟು ತನ್ನ ಲಾವಣಿಯನ್ನು ಮುಟ್ಟಿಸಿದನು.

೮. ರಾಮನು ಗೋವಿಂದನಿಗೆ ೬೦ ರೂಪಾಯಿಗಳನ್ನು ಕಳಿಸಿ ತನ್ನ ತಮ್ಮನಾದ ಹರಿಗೆ ೨೫ ರೂ. ಕೊಡಬೇಕೆಂದೂ, ಉಳಿದ ರೂ. ತನ್ನ ಹೆಸರಿನಿಂದ ಬ್ಯಾಂಕಿನಲ್ಲಿ ಇಡಬೇಕೆಂದೂ ಪತ್ರ ಬರೆದನು.

೯. ನಿಂಗಪ್ಪ ರೋಣ ಇವರಿಗೆ ಚೆನ್ನಪ್ಪ ಗದಗ ಇವನು ಕೊಡತಕ್ಕ ೧೫೦ ರೂ. ಗಳಲ್ಲಿ ೫೦ ರೂ. ಎಮ್ಮಿ, ೫೦ ರೂ. ಗೆ ೫ ಬಂಡಿ ಕಟ್ಟಿಗೆ ಕೊಟ್ಟು, ಉಳಿದ ರೂ. ಗಳಿಗಾಗಿ ಕಾಗದ ಬರೆದುಕೊಟ್ಟನು.

೧೦. ೧೫ ರೂ ಗಳಿಗೆ ಸಿದ್ದಪ್ಪನಿಗೆ ಗೋಪಾಳರಾಯರು ತಮ್ಮ ಹೊಲವನ್ನು ಲಾವಣಿ ಕೊಟ್ಟರು.

ಕೆಳಗಿನ ವ್ಯವಹಾರಗಳನ್ನು ಹೇಳಿ ಸಂಬಂಧಿಸಿವವರಲ್ಲಿ ಬರೆದು ತೋರಿಸಿರಿ.

೧೧. ಬನು ೨೦೦ ರೂ. ಲಾವಣಿ ಮಲ್ಲಪ್ಪನಿಂದ ವಸೂಲಮಾಡಿ ೧೫೦ ರೂ. ಕೊಟ್ಟು ಬಂಗಾರ ತೊಲೆ ೩, ದರ ೫೦ ರೂ. ಪ್ರಕಾರ ಕೊಂಡನು.

೧೨. ಅಂಗಡಿಯ ದುರಸ್ತಿಗೆ ೧೫ ರೂ. ಕೊಂಡನು.

೧೩. ಕೊಪ್ಪಳ ನಾಗಪ್ಪನು ಕೊಟ್ಟೂರ ಅಯ್ಯಪ್ಪನಿಗೆ ತನ್ನ ಸಾಯಕಲ್ಲನ್ನು ೫೦ ರೂ. ಗಳಿಗೆ ಮಾರಿದನು.

೧೪ ಅನು ೧೦೦ಕ್ಕೆ ೧ ಆಣೆ ಬಟ್ಟಾ ಕೊಟ್ಟು ೧೦೦೦ ರೂ. ಗಳ ಕರನ್ಸೀ ನೋಟುಗಳನ್ನು ತಕ್ಕೊಂಡನು.

೧೫ ಅನು ೧೦೦೦ ರೂ. ಗಳ ಕರನ್ಸೀ ನೋಟುಗಳನ್ನು ಪೋಸ್ಟಿನಿಂದ (ವಿಮಾ ತೆಗೆದು) ಬನಿಗೆ ಕಳಿಸಿದನು. ೧ ರೂ. ೪ ಆಣೆ ಖರ್ಚು ಬಂದಿತು.

೧೬ ಅನು ೯೦ ರೂ. ಗಳನ್ನು ತನ್ನ ಮಗನ ಕಾಲೇಜದ ಫೀ ಕೊಟ್ಟನು.

೧೭ ಅನು ೫೦೦ ರೂ. ಗಳನ್ನು ಬ್ಯಾಂಕಿನಲ್ಲಿಟ್ಟನು.

೧೮ ಗದಗಿನ ಗೋಪಾಳರಾಯರ ಪತ್ರದ ಪ್ರಕಾರ ಅವರ ಸಲುವಾಗಿ ೧೦ ರೂ. ಗಳ ಸಾಪಿನಡಬ್ಬು ಖರೀದಿ ಮಾಡಿ ೨ ರೂ. ರೇಲ್ವೆ ಚಾರ್ಜ ಕೊಟ್ಟು ಕಳಿಸಿದೆವು.

೧೯ ಗಾಡಿ ಸಂಗಪ್ಪನು ೨೫ ರೂ. ಗಳ ರೇಶಿಮೆಯನ್ನು ಕೊಂಡು ೧೦ ರೂ. ನೇಯುವ ಕೂಲಿಯನ್ನು ಕೊಟ್ಟು ತಯಾರಾದ ಸೀರೆಯನ್ನು ೪೦ ರೂ. ಗಳಿಗೆ ಮಾರಿದನು.

೨೦ ಅನು ತನ್ನ ಹೊಲವನ್ನು ಬನಿಗೆ ೩೦೦ ರೂ. ಗಳಿಗೆ ಲಾವಣಿಯಿಂದ ಕೊಟ್ಟನು. ಬನು ೩೦ ರೂ. ಸರಕಾರಿ ಹಪ್ತೆಯನ್ನೂ, ೭೦ ರೂ. ಗಳನ್ನೂ ೨೦೦ ರೂ. ಗಳಿಗೆ ೩೨ ಮಣ ಜೋಳವನ್ನೂ ಕೊಟ್ಟನು. (೧ ಮಣ=೬೪ ಸೇರು)

೨೧ ರೋಣ ಶ್ರೀನಿವಾಸರಾಯರು ಅನ ಅಂಗಡಿಯಲ್ಲಿ ತಮ್ಮ ಹೆಸರಿನಿಂದ ಇಟ್ಟ ೨೦೦೦ ರೂ. ಗಳಲ್ಲಿ ೫೦೦ ರೂ. ಗಳನ್ನು ತಮ್ಮ ಚಿ. ಭೀಮರಾಯನ ಹೆಸರಿನಿಂದ ಇಡಬೇಕೆಂದು ಪತ್ರ ಬರೆದರು.

೨೨ ಮುಂಬಯಿ ದಲಾಲ ಗೋಕುಲಜಿ ಇವರು, ಧಾರವಾಡ ನಾಗಪ್ಪನು ಪತ್ರ ಬರೆದಂತೆ ಗಡಿಯಾರ ಡಝನ್ ೬, ದರ ೧೦೦ ರೂ. ಪ್ರಕಾರ ಕೊಪ್ಪಳ ಸಿಂಗಪ್ಪನಿಗೆ ಕಳಿಸಿದರು. ಸಿಂಗಪ್ಪನು ಗೋಕುಲಜಿಯವರಿಗೆ ಹತ್ತಿ ನಗ ೨, ದರ ೩೦೦ ರೂ. ಪ್ರಕಾರ ಕಳಿಸಿ ನಾಗಪ್ಪನಿಗೆ ತಿಳಿಸಿದನು.

೨೩ ಗಾಡಿ ಸಿಂಗಪ್ಪನು ದಂಡಿನ ದಾನಪ್ಪನಿಗೆ ೧೦೦೦ ರೂ. ಗಳನ್ನು ಕಳಿಸಿ ೪೦೦ ರೂ. ಗಳನ್ನು ಅವನ ಪತ್ರದ ಪ್ರಕಾರ ಹಳ್ಳಿ ಸಂಗಪ್ಪನಿಗೆ ಕೊಟ್ಟನು. ಮತ್ತು ೬೦೦ ರೂ. ಗಳಿಗೆ ಒಂದು ಜೋಡು ಎತ್ತನ್ನು ಕಳಿಸಬೇಕೆಂದೂ ಉಳಿದ ಹಣವನ್ನು ತನ್ನ ಹೆಸರಿನಿಂದ ಇಡಬೇಕೆಂದೂ ಪತ್ರ ಬರೆದನು.

೨೪ ಗದಗ ಬಸಪ್ಪನಿಗೆ ಧಾರವಾಡ ಕಂಪನಿಯವರು ೮ ರೇಶಿಮೆಯ ಸೀರೆಗಳನ್ನು ಕಳುಹಿಸುವದಕ್ಕಾಗಿ ೩೦೦ ರೂ. ಗಳನ್ನು ಕಳಿಸಿದರು. ಹೆಚ್ಚಿಗೆ ಹಣ ಬೇಕಾದರೆ ನಾಯಕ ನಾಗಪ್ಪನ ಕಡೆಯಿಂದ ಇಸಗೊಳ್ಳಬೇಕೆಂದು ಪತ್ರ ಬರೆದರು. ಅವನು ನಾಗಪ್ಪನ ಕಡೆಯಿಂದ ೧೦೦ ರೂ. ಗಳನ್ನು ತೆಗೆದುಕೊಂಡು ಸೀರೆ ೮,

ದರ ೬೦ ರೂ. ಪ್ರಕಾರ ಕೊಂಡು ೧೫ ರೂ. ಟಪಾಲ ಖರ್ಚು ಕೊಟ್ಟು ಕಡಿಸಿ ಯಾವ ಹಣವನ್ನು ಹಾಕಿ ಕಳುಹಿದನು.

೨೫ ಪೆಂಡಾರಿ ಹುಶೇನನು ಒಯ್ದ ೪೦೦ ರೂ. ಗಳಲ್ಲಿ ತಿಂಗಳಿಗೆ ೩೦ ರೂ ಪ್ರಕಾರ ಒಂದು ವರ್ಷದ ಟಾಂಗಾದ ಬಾಡಿಗೆಯನ್ನು ಮುರಕೊಂಡು ಉಳಿದ ರೂ. ಗಳನ್ನು ಕೊಟ್ಟನು.

೨೬ ಕೇರೋಪಂತರು ೨೪ ರೂ. ಗಳ ಬಟಾಟಿ ಖರೀದಿ ಮಾಡಿ ಕಳಿಸ ಬೇಕೆಂದು ಹೇಳಿ ಕಳಿಸಿದರು. ಬಾಗವಾನ ಗಿಡ್ಡಪ್ಪನಲ್ಲಿ ಖರೀದಿ ಮಾಡಿ ಕಳಿಸಿದೆವು.

೨೭ ಅಸಿಗೆ ಬನ ಕಡೆಯಿಂದ ೫೦೦೦ ರೂ. ಗಳ ಕಿಮ್ಮತ್ತಿನ ಜವಳಿ ಮುಟ್ಟಿತು. ಅದರ ಕಿಮ್ಮತ್ತಿನ ಹೊರತು ೧೫೦ ರೂ. ಗಳ ತರುವ ಖರ್ಚಿನ ಹಾಗು ೧೫ ರೂ. ಗಳ ಧರ್ಮಾದಾವದ ಯಾದಿ ಬಂದಿತು.

೨೮ ನಿಂಗಪ್ಪ ಕೆಲಗೇರಿ ಈತನು ಹೋದವರ್ಷ ನಮ್ಮಲ್ಲಿ ಒಯ್ದ ೨೦೦ ರೂ. ಹಾಗೂ ೧೦೦ ಕ್ಕೆ ೧ ವರ್ಷಕ್ಕೆ ೮ ರಂತೆ ೧೬ ರೂ. ಬಡ್ಡಿ ಕೂಡಿಸಿ ತಂದು ಕೊಟ್ಟನು. ೨ ರೂ. ಸೂಟ ಬಿಟ್ಟೆವು.

೨೯ ಧಾರವಾಡದಲ್ಲಿಯ ವನಿತಾ ಸೇವಾ ಸಮಾಜಕ್ಕೆ ೧೦ ರೂ. ಕೊಟ್ಟೆವು.

೩೦ ಕಾರಕೂನನಾದ ರಾಮಣ್ಣನಿಗೆ ೨೦ ರೂ. ಪಗಾರ ಮುಂಗಡ ಕೊಟ್ಟೆವು.

೩೧ ಇಂದು ನಮ್ಮ ಕಿರಾಣಿ ಅಂಗಡಿಯಲ್ಲಿ ೨ ರೂ. ೬ ಆ. ೩ ದ.. ಗಳ ಜಿನಸುಗಳ ಕಿರಕೋಳ ಮಾರಾಟವಾಯಿತು.

೩೨ ೧೦ ರೂ. ಕೊಟ್ಟು ಸೇವಿಂಗ್ಸ್ ಡಿಫೆನ್ಸ ಸರ್ಟಿಫಿಕೇಟ ಕೊಂಡೆವು. ಯುದ್ಧ ಸಹಾಯನಿಧಿಗೆ ೧ ರೂ. ಕೊಟ್ಟೆವು. ರೆಡ್‌ಕ್ರಾಸ್ ಸೊಸಾಯಿಟಿಗೆ ೪ ಆ. ಕೊಟ್ಟೆವು.

೩೩ ಅಸೂಲಾಲ ಮಾರವಾಡಿಯಲ್ಲಿ ೧ ಗಂಜಿಫ್ರಾಕ್ ೧ ರೂ. ೧೨ ಆಣೆಗೆ ಕೊಂಡಿತು.

೩೪ ವಿಜಯ ಪ್ರೆಸ್‌ದಲ್ಲಿ ಮೂರು ಪುಸ್ತಕ ಬಾಯಂಡಿಂಗ ಮಾಡಿಸಿ ೯ ಆಣೆ ಕೊಟ್ಟಿತು.

೩೫ ಸರಕಾರದಿಂದ ಮಾನ್ಯತೆ ಪಡೆದ ಜವಳೀ ಅಂಗಡಿಯಲ್ಲಿ ೮ ಆ. ೬ ಪೈಗೆ ಒಂದು ವಾರದಂತೆ ೨ತ್ತಿ ವಾರ ಅರಿವೆ ಕೊಂಡು ೧೦ ಆಣೆ ಕೂಲಿ ಕೊಟ್ಟು ಜೋಶಿ ಟೇಲರನಲ್ಲಿ ಒಂದು ಅಂಗಿಯನ್ನು ಹೊಲಿಸಿತು.

೩೬ ೧೨ ಕಾರ್ಡ, ೬ ಪಾಕೀಟುಗಳನ್ನು ಸಿಟಿ ಪೋಸ್ಟಿನಲ್ಲಿ ಕೊಂಡಿತು.

---

# ಒಂದನೆಯ ಪ್ರಕರಣ

## ಕೀರ್ದಿ

೧. ಕೀರ್ದಿ:--- (ಅ) ರೋಜಕೀರ್ದಿ, (ಬ) ಬೈಠೀಕೀರ್ದಿ.
೨. ರೋಜಕೀರ್ದಿಯ ಪ್ರಾರಂಭ.
೩. ರೋಜು ಶಿಲಕು ತೆಗೆಯುವದು.
೪. ಬೈಠೀಕೀರ್ದಿಯ ಪ್ರಾರಂಭ, ಮತ್ತು ಶಿಲಕು ತೆಗೆಯುವದು.
೫. ಪ್ರಶ್ನಗಳು.

೧. ವ್ಯವಹಾರಸ್ಥನು ತನ್ನಲ್ಲಿ ನಡೆದ ಎಲ್ಲ ವ್ಯವಹಾರಗಳನ್ನು ಪರಿಣಾಮವಾರ ವಿಲೇವಾರಿ ಮಾಡಿ ಬರೆದು ಶಿಲಕು ತೆಗೆಯುವ ವಹಿಗೆ ಕೀರ್ದಿ ಅನ್ನುವರು. ಕೀರ್ದಿಯಲ್ಲಿ ಎರಡು ಪ್ರಕಾರಗಳು—(೧) ರೋಜಕೀರ್ದಿ, (೨) ಬೈಠೀಕೀರ್ದಿ.

(೧) ಪ್ರತಿದಿವಸ ನಡೆದ ಎಲ್ಲ ವ್ಯವಹಾರಗಳನ್ನು ಪರಿಣಾಮವಾರ ವಿಲೇವಾರ ಮಾಡಿ ತಪಶೀಲವಾರ ಬರೆದು ಪ್ರತಿದಿನ ಶಿಲಕು ತೆಗೆಯುವ ವಹಿಗೆ ರೋಜಕೀರ್ದಿ ಅನ್ನುವರು.

(೨) ಎಲ್ಲ ವ್ಯವಹಾರಗಳನ್ನು ಪರಿಣಾಮವಾರ ವಿಲೇವಾರಿ ಮಾಡಿ ಆಗಾಗ್ಗೆ ತಪಶೀಲವಾರ ಬರೆದು (ಪ್ರತಿದಿವಸ ಶಿಲಕು ತಗೆಯದೆ) ತಮಗೆ ಕೂಡಿದಾಗ ಅಂದರೆ ವಾರಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆ ಶಿಲಕು ತೆಗೆಯುವ ವಹಿಗೆ ಬೈಠೀಕೀರ್ದಿ ಅನ್ನುವರು.

೨. ರೋಜಕೀರ್ದಿಯ ಪ್ರಾರಂಭ:---ಈ ದೇಶದಲ್ಲಿ ಹೊಸದಾಗಿ ವ್ಯವಹಾರವನ್ನು ಪ್ರಾರಂಭಿಸುವರು ಬಹುತರವಾಗಿ ಕಾರ್ತಿಕ ಶು. ೧ ಗೆ ಇಲ್ಲವೆ ಚೈತ್ರ ಶು. ೧ ಗೆ ಪ್ರಾರಂಭಿಸುವರು; ಆದರೆ ಇತ್ತಿತ್ತಲಾಗಿ ತಮಗೆ

ಬೇಕಾದಾಗ ಪ್ರಾರಂಭಿಸುವ ರೂಢಿಯುಂಟು. ಅವರು ವರ್ಷಕ್ಕೊಮ್ಮೆ ತಮ್ಮ ವ್ಯಾಪಾರದ ಸ್ಥಿತಿಗತಿಗಳನ್ನು ತಿಳಿದುಕೊಳ್ಳುತ್ತಾರೆ. ಕಾರ್ತಿಕ ಶು. ೧ ಗೆ ಇಲ್ಲವೆ ಚೈತ್ರ ಶು. ೧ ಗೆ ಪ್ರಾರಂಭಿಸುವವರು ಅನುಕ್ರಮವಾಗಿ ಆಶ್ವಿನ ಬಹುಳ ೩೦ಕ್ಕೆ ಇಲ್ಲವೆ ಫಾಲ್ಗುಣ ಬಹುಳ ೩೦ಕ್ಕೆ ಮುಗಿಸುವರು ವ್ಯಾಪಾರಸ್ಥರು ತಮ್ಮ ಕೀರ್ದಿಯ ಮೇಲೆ ಪೂರ್ಣ ಹೆಸರು, ಇರುವ ಊರು, ಇವುಗಳನ್ನು ಬರೆದು ಈ ಮಿತಿಯಿಂದ (ತಾರೀಖಿನಿಂದ) ಈ ಮಿತಿಯ (ತಾರೀಖಿನ) ವರೆಗೆ ಒಂದು ವರ್ಷದ ಕೀರ್ದಿಯು ಎಂದು ಬರೆಯುವರು. ಕೀರ್ದಿಯನ್ನು ಬರೆಯುವವನು ಕಾರಕೂನನಿದ್ದರೆ ಅವನ ಹೆಸರನ್ನು ಸಹ ಬರೆಯುವರು.

ವ್ಯವಹಾರಗಳನ್ನು ಹೇಗೆ ಬರೆಯಬೇಕೆಂಬುದನ್ನು ಹಿಂದೆ ಹೇಳಿದೆಯಷ್ಟೇ; ಕೀರ್ದಿಯನ್ನು ಬರೆಯುವ ನಮೂನೆಯು ವ್ಯವಹಾರವನ್ನು ಬರೆಯುವ ನಮೂನೆಯಂತೆಯೇ ಇರುತ್ತದೆ. ವ್ಯಾಪಾರಸ್ಥನು ತನ್ನ ಹೆಸರಿನ ಖಾತೆಯನ್ನು ಬರೆಯದೆ ಅದಕ್ಕೆ ಖುದ್ದ ಖಾತೆ ಎಂದು ಬರೆಯುವನು. ಇದರಲ್ಲಿ ತನ್ನ ಉತ್ಪನ್ನ ಹಾಗು ಖರ್ಚಿನ ಜಮಾಖರ್ಚನ್ನು ಬರೆಯುವನು.

ವ್ಯಾಪಾರಕ್ಕಾಗಿ ಕೂಡಿಸುವ ಹಣಕ್ಕೆ ಭಾಂಡವಲು ಅನ್ನುವರು. ಭಾಂಡವಲು ರೋಖ ರೂಪಾಯಿಗಳಾಗಲಿ, ಕೆಲವು ರೂಪಾಯಿ ಮತ್ತು ಕೆಲವು ಸರಕುಗಳಾಗಲಿ, ಇಲ್ಲವೆ ಎಲ್ಲವೂ ಸರಕುಗಳೇ ಆಗಲಿ ಇರಬಹುದು. ಈ ಖಾತೆಗೆ ಭಾಂಡವಲು ಖಾತೆ ಅನ್ನುವರು. ಭಾಂಡವಲಿನಲ್ಲಿ ಮಾಲು ಇದ್ದರೆ ವ್ಯಾಪಾರಸ್ಥನು ಅದನ್ನು ಕೊಂಡಂತೆ ಆಗುತ್ತದೆ. ಮಾಲಿನ ರಕಮು ಪರಭಾರೆ ಆಗುವದು.

ಉದಾ :—(೧) ನಾಗಪ್ಪ ಬೆಳವಲ ಸಾ. ಹುಬ್ಬಳ್ಳಿ ಇವನು ೫೦೦೦ರೂ. ಗಳನ್ನು ಹಾಕಿ ವ್ಯಾಪಾರವನ್ನು ಪ್ರಾರಂಭಿಸಿದನು. ಸ್ವತಃ ಕೀರ್ದಿಯನ್ನು ಬರೆಯುವನು. ತಾ. ೧-೧-೧೯೪೫ ಇ. ಯಿಂದ ತಾ. ೩೧-೧೨-೧೯೪೫ ಇ. ಪೂರ್ಣ.

೯.

ರೋಜಕೀರ್ದಿಯು. ಖಾಸಗತ ರಾಜಶ್ರೀ ನಾಗಪ್ಪ ಬೆಳವಲ ಸಾ. ಹುಬ್ಬಳ್ಳಿ ತಾ. ಹುಬ್ಬಳ್ಳಿ ಜಿಲ್ಹಾ ಧಾರವಾಡ ತಾ. ೧-೧-೧೯೪೫ ಇ. ಯಿಂದ ತಾ. ೩೧-೧೨-೪೫ ಇ. ಪೂರ್ಣ.

ತಾ. ೧—೧—೧೯೪೫ ಇ.

ಜಮೆ —————————— ರೂ. ಖರ್ಚು —————————— ರೂ.

೧೦೦೦ ಭಾಂಡವಲ ಖಾತೆ:—
ವ್ಯಾಪಾರಕ್ಕಾಗಿ ಭಾಂಡವಲ
ಹಾಕಿದ್ದು.
ಖಾ. ಪಾ. ಶಾ. ನಂ.

---

ಉದಾ:— (೨) ಸನ್ ೧೯೪೫ ಇ. ಒಂದು ವರ್ಷದ ಕೀರ್ದಿ.

ಹನುಮಂತರಾವ ಕುಲಕರ್ಣಿ, ಮಂಗಳವಾರಪೇಟೆ, ಧಾರವಾಡ ಇವರು ಕೆಳಗೆ ತೋರಿಸಿದ ಭಾಂಡವಲವನ್ನು ಹಾಕಿ ವ್ಯಾಪಾರವನ್ನು ಪ್ರಾರಂಭಿಸಿದರು. ಇವರ ಕಾರಕೂನನಾದ ಕೃಷ್ಣಪ್ಪ ನಲವಡಿ ಎಂಬವನು ಕೀರ್ದಿಯನ್ನು ಬರೆಯುತ್ತಾನೆ.

೨೦೦೦ ರೂ. ರೋಖು.
೩೦೦೦ ರೂ. ಬಂಗಾರ ತೊಲೆ ೬೦ ದರ ೫೦ ರೂ. ಪ್ರ.
೧೦೦೦ ರೂ. ಜವಳಿ ತಪಶೀಲು:— ಸೀರೆ ೩೦, ದರ ೧೫ ರೂ. ಪ್ರಕಾರ
ಖಣ ೧೪೦ ದರ ೨ ಪ್ರ. ಧೋತರ ಜೋಡು ೫೪, ದರ ೫ ರೂ. ಪ್ರ.

ಈ ವ್ಯಾಪಾರದಲ್ಲಿ ಮಾಲನ್ನು ಉದ್ರಿ ಖರೀದಿ ಮಾಡಿರುತ್ತದೆಂದು ತಿಳಿಯಬೇಕು. ರೋಖು ಬಂದ ಹಣವು ೨೦೦೦ ರೂ ಉಳಿದ ಮಾಲನ್ನು ಹನುಮಂತರಾಯರು ಉದ್ರಿ ಕೊಂಡಂತಾಯಿತು.

ಇಲ್ಲಿ ಒಟ್ಟು ೫ ವ್ಯವಹಾರಗಳಿರುವವು ಅವುಗಳಲ್ಲಿ ಮೂರು ಭಾಂಡವಲ ಖಾತೆಗೆ ಒಂದು ಬಂಗಾರದ ಖಾತೆಗೆ, ಮತ್ತು ಒಂದು ಜವಳೀ ಖಾತೆಗೆ ಸಂಬಂಧಿಸಿದವುಗಳು ಇರುತ್ತವೆ. ಇವುಗಳ ರಕಮುಗಳು ಮೂರು; ಒಂದು ರೋಖು, ಎರಡು ಪರಭಾರೆ

ಭಾಂಡವಲ ಖಾತೆಯ ವ್ಯವಹಾರಗಳ ರಕಮುಗಳ ಬೇರೀಜು(೨೦೦೦+೩೦೦೦+೧೦೦೦=) ೬೦೦೦ ರೂ. ಪರಿಣಾಮ ೬೦೦೦ ರೂ. ಜಮೆ; ಖಾತೆ ಭಾಂಡವಲಿನದು, ತಪಶೀಲು ೨೦೦೦ ರೂ. ರೋಖು, ೩೦೦೦ ರೂ ಬಂಗಾರ, ೧೦೦೦ ರೂ. ಜವಳಿಯು,

ಬಂಗಾರದ ಖಾತೆಯ ವ್ಯವಹಾರದ ಪರಿಣಾಮ-೩೦೦೦ ರೂ. ಖರ್ಚು; ರಕಮು-೩೦೦೦ ರೂ. ಖಾತೆ-ಬಂಗಾರದ್ದು; ತಪಶೀಲು ಬಂಗಾರ ತೊಲೆ ೬೦; ದರ ೫೦ ರೂ ಪ್ರ.

ಜವಳಿಯ ಖಾತೆಯ ವ್ಯವಹಾರಗಳ ಪರಿಣಾಮ-೩೦೦೦ ರೂ. ಖರ್ಚು, ರಕಮು-೧೦೦೦ ರೂ. ಖಾತೆ—ಜವಳಿಯದು; ತಪಶೀಲು—ಸೀರೆ ೩೦, ದರ ೧೫ ರೂ. ಪ್ರ, ಖಣ ೧೪೦, ದರ ೨ ರೂ. ಪ್ರ, ಧೋತರ ಜೋಡು ೫೪, ದರ ೫ ರೂ. ಪ್ರ,

ಶ್ರೀ

ರೋಜಕೀರ್ದಿ. ರಾಜಶ್ರೀ ಹನುಮಂತರಾವ ಕುಲಕರ್ಣಿ, ಮಂಗಳವಾರಪೇಟೆ ಧಾರವಾಡ, ಇವರ ವಿದ್ಯಮಾನ ಕೃಷ್ಣಪ್ಪ ನಲವಡಿ ಸಾ. ಹುಬ್ಬಳ್ಳಿ, ಜಿ. ಧಾರವಾಡ ತಾರೀಖು ೧—೧—೧೯೪೫ ಇ. ಯಿಂದ ತಾ. ೩೧—೧೨—೪೫ ಇ. ಪೂರ್ಣ.

ತಾ. ೧—೧—೪೫ ಇ.

**ಜಮೆ — ರೂ.**

೬೦೦೦ ಭಾಂಡವಲ ಖಾತೆ:—
ತಪಶೀಲು:—
೨೦೦೦ ರೋಖು.
೩೦೦೦ ಬಂಗಾರ ತೊಲೆ ೬೦, ದರ ೫೦ ರೂ. ಪ್ರ.
೧೦೦೦ ಜವಳಿ ಸೀರೆ ೪೦, ದರ ೧೫ ರೂ. ಪ್ರ. ಖಣ ೧೪೦, ದರ ೨ ರೂ. ಪ್ರ. ಧೋತರ ಜೋಡು ೫೪, ದರ ೫ ರೂ. ಪ್ರ.

೬೦೦೦ ಅಂತೂ ಇವುಗಳನ್ನು ಭಾಂಡವಲು ಮಾಡಿಕೊಂಡು ವ್ಯಾಪಾರವನ್ನು ಪ್ರಾರಂಭಿಸಿದ್ದರಿಂದ ಆ ಆ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

**ಖರ್ಚು — ರೂ.**

೩೦೦೦ ಬಂಗಾರ ಖಾತೆ:—
ಬಂಗಾರ ತೊಲೆ ೬೦, ದರ ೫೦ ಪ್ರ. ಭಾಂಡವಲ ಹಾಕಿದ್ದರಿಂದ ಭಾಂಡವಲ ಖಾತೆಗೆ ಜಮೆ.
ಖಾ ಪಾ. ಪಾ. ನಂ.

೧೦೦೦ ಜವಳೀ ಖಾತೆ:—
ತಪಶೀಲು:—
೪೫೦ ಸೀರೆ ೪೦ ದರ ೧೫ ರೂ. ಪ್ರಕಾರ.
೨೮೦ ಖಣ ೧೪೦ ದರ ೨ ರೂ. ಪ್ರಕಾರ.
೨೬೦ ಧೋತರ ಜೋಡು ೫೪ ದರ ೫ ರೂ. ಪ್ರ.

೧೦೦೦ ಅಂತೂ ಭಾಂಡವಲು ಹಾಕಿದ್ದರಿಂದ ಭಾಂಡವಲ ಖಾತೆಗೆ ಜಮೆ.
ಖಾ. ಪಾ. ಪಾ. ನಂ.

೩. ಶಿಲಕು ತೆಗೆಯುವದು:-ಮೇಲೆ ರೋಜಕೀರ್ದಿಯಲ್ಲಿ ಜಮೆಯ ಕಡೆಗೆ ಮೊದಲು ಭಾಂಡವಲವನ್ನು ಬರೆಯಬೇಕು. ಆ ಮೇಲೆ ಆ ದಿವಸದ ಎಲ್ಲ ವ್ಯವಹಾರಗಳನ್ನು ಕ್ರಮವಾಗಿ ಬರೆಯಬೇಕು. ಸಾಯಂಕಾಲಕ್ಕೆ ಜಮೆಯ ಕಡೆಯ ರಕಮುಗಳ ಬೇರೀಜಿನಲ್ಲಿ ಖರ್ಚಿನ ಕಡೆಯ ರಕಮುಗಳ ಬೇರೀಜನ್ನು ಕಳೆಯಲು ಉಳಿದದ್ದೇ ನಾಳಿನ ಶಿಲಕು ಆಗುವದು. ಆ ಮೇಲೆ ತಮ್ಮಲ್ಲಿಯ ರೋಖು ಶಿಲಕನ್ನು ಎಣಿಸಬೇಕು. ಈ ಎಣಿಸಿದ ಶಿಲಕೂ ಕೀರ್ದಿಯಿಂದ ತೆಗೆದ ಶಿಲಕೂ ಸರಿಯಾದರೆ, ಅದನ್ನು ನಾಳಿನ ( ಮುಂದಿನ ಶಿಲಕು ಎಂದು ಖರ್ಚಿನ ಕಡೆಗೆ ಬರೆಯಬೇಕು. ಅಂದರೆ ಜಮೆಯ ಕಡೆಯ ಎಲ್ಲ ರಕಮುಗಳ ಬೇರೀಜು ಖರ್ಚಿನ ಕಡೆಯ ಎಲ್ಲ ರಕಮುಗಳ ಬೇರೀಜಿಗೆ ಸರಿಯಾಗುವದು.

ಶಿಲಕಿನ ರಕಮು ( ಪರಭಾರೆ ಜಮಾಖರ್ಚು ) ಆಗುತ್ತದೆ. ಯಾಕಂದರೆ ವ್ಯಾಪಾರಿಯ ಶಿಲಕಿನಲ್ಲಿ ಈ ಜಮಾಖರ್ಚಿನಿಂದ ಹೆಚ್ಚು ಕಡಿಮೆಯಾಗುವದಿಲ್ಲ.

ಆದುದರಿಂದ ಆ ರಕಮು ಖರ್ಚು ಬರೆದ ಬಳಿಕ ನಿನ್ನಿನ (ಹಿಂದಿನ) ಶಿಲಕು ಎಂದು ಮರುದಿನ ಕೀರ್ದಿಯಲ್ಲಿ ಪ್ರಾರಂಭಕ್ಕೆ ಜಮೆಯ ಕಡೆಗೆ ಬರೆಯಬೇಕು.

ರೋಖ ಶಿಲಕು ಮತ್ತು ಕೀರ್ದಿಯ ಶಿಲಕು ಸರಿಯಾಗದಿದ್ದರೆ, ಆ ದಿವಸದ ಜಮಾಖರ್ಚು ಸರಿಯಾಗಿಲ್ಲವೆಂದು ತಿಳಿಯಬೇಕು. ಒಮ್ಮೊಮ್ಮೆ ಇವೆರಡೂ ಸರಿಯಾದರೂ ಆ ದಿವಸದ ಜಮಾಖರ್ಚು ಸರಿಯಾಗಿರುವದೆಂದೂ ತಿಳಿಯಲಿಕ್ಕೆ ಬರುವದಿಲ್ಲ; ಯಾಕೆಂದರೆ ಪರಭಾರೆ ಆದ ವ್ಯವಹಾರಗಳನ್ನು ಬರೆಯದೆ ಬಿಟ್ಟದ್ದು ಗೊತ್ತಾಗುವದಿಲ್ಲ. ಅದು ಗೊತ್ತಾಗಬೇಕಾದರೆ ಕೆಳಗಿನಂತೆ ಜೀನಸುಗಳ ಯಾದಿಯನ್ನಿಡಬೇಕು.

## ಜೀನಸುಗಳ ಯಾದಿಯು

| ತಾರೀಖು | ಯಾರಿಂದ | ವಿವರ | ಟಾಕು | ಕಾಗದ | ತೊಗರಬೇಳೆ |
|---|---|---|---|---|---|
| ೧—೨—೪೫ | ವೇಸೂರ ಸೋಮಪ್ಪನಿಂದ | ಹಿಂದಿನ ಶಿಲಕು | ೧೨ ಡಝನ | ೨೦ ಗಡ್ಡಿ | ೮ ಮಣ |
| ,, | | ಜಮೆ | ೮ ಡ. | ೩೦ ಗಡ್ಡಿ | ೧೨ ಮಣ |
| ೧—೨—೪೫ | | ಖರ್ಚು | ೧೦ ಡಝನ | ೪೦ ಗಡ್ಡಿ | ೧೬ ಮಣ |
| ,, | | ನಾಶ | — | — | — |
| ೨-೨—೪೫ | | ಶಿಲಕು | ೧೦ ಡ. | ೧೦ ಗಡ್ಡಿ | ೪ ಮಣ |
| ೨—೨—೪೫ | | ಖರ್ಚು | ೬ ಡ. | — | — |
| ೩—೨—೪೫ | | ಶಿಲಕು | ೪ ಡ. | ೧೦ ಗಡ್ಡಿ | ೪ ಮಣ |

ಜೀನಸಿನ ಯಾದಿಯಿಂದ ತೆಗೆದ ಶಿಲಕು ಮಾಲಿಗೆ ಅಂಗಡಿಯಲ್ಲಿ ಉಳಿದ ಜೀನಸುಗಳು ಸರಿಯಾದರೆ ಅಂದಿನ ಪರಭಾರೆ ಜಮಾಖರ್ಚು ಸರಿಯಾಗಿದೆ ಎಂದು ತಿಳಿಯಬೇಕು. ಕಡಿಮೆ ಜೀನಸು ಕಂಡುಬಂದರೆ, ಯಾವದೊಂದು ವ್ಯವಹಾರವನ್ನು ಬರೆದಿಲ್ಲವೆಂದೂ, ಇಲ್ಲವೆ ಜೀನಸು ಹೋಗಿರುವದೆಂದೂ ತಿಳಿಯಬೇಕು. ಕೆಲವು ಪದಾರ್ಥಗಳು ಅಂದರೆ ಬೆಲ್ಲ, ಉಪ್ಪು ಮುಂತಾದವುಗಳು ಅರಿಕೆ ಅಳತೆಗಳ ದೆಸೆಯಿಂದ ಸ್ವಲ್ಪ ಹೆಚ್ಚು ಕಡಿಮೆಯಾಗುವವು. ಕಡಿಮೆಯಾದದ್ದು ಗೊತ್ತಾದ ಕೂಡಲೆ ಅದೇ ಖಾತೆಗೆ ಅಷ್ಟು ಜೀನಸನ್ನು ಖರ್ಚು ಬರೆಯಬೇಕು

ಉದಾ:—(೧) ಹುಬ್ಬಳ್ಳಿಯ ರಾಮರಾಯರು ೧೨೦೦ ರೂ. ರೋಖು ಹಾಕಿ ವ್ಯಾಪಾರವನ್ನು ಪ್ರಾರಂಭಿಸಿ ಕೆಳಗಿನ ವ್ಯವಹಾರವನ್ನು ನಡಿಸಿದರು. ತಾರೀಖು ೨೦—೨—೧೯೪೫ ಇ.

೭೫೦ ರೂ. ಧೋತರ ಜೋಡು ೧೫೦, ದರ ೫ ರೂ. ಪ್ರ. ಬ್ಯಾಡಗಿ ನಾಗಪ್ಪನಲ್ಲಿ ಉದ್ರಿ ತಂದರು. ೧೨ ರೂ. ನಡೆದ ತಿಂಗಳ ಮನೆಯ ಬಾಡಿಗೆಯನ್ನು ಕೊಟ್ಟರು. ೫೦೦ ರೂ. ಬಂಗಾರ ತೊಲೆ ೧೦, ದರ ೫೦ ರೂ. ಪ್ರ. ಖರೀದಿ ಮಾಡಿದರು. ಅವರಲ್ಲಿ ೨॥ ತೊಲೆ ಬಂಗಾರ ೬೦ ರೂ. ಪ್ರ. ಮಾರಿದರು.

## ಹುಬ್ಬಳ್ಳಿಯ ರಾಮರಾಯರ ಕೀರ್ದಿ

ತಾ. ೨೦—೨—೧೯೪೫ ಇ.

| ಜಮೆ ——— ರೂ. | ಖರ್ಚು ——— ರೂ. |
| --- | --- |
| ೧೨೦೦ ಭಾಂಡವಲ ಖಾತೆ:— ವ್ಯಾಪಾರಕ್ಕೆ ಭಾಂಡವಲು ಹಾಕಿದ್ದು. ಖಾ. ಪಾ. ಪಾ. ನಂ. | ೭೫೦ ಜವಳಿಯ ಖಾತೆ:— ಧೋತರ ಜೋಡು ೧೫೦, ದರ ೫ ರೂ. ಪ್ರ. ಬ್ಯಾಡಗಿ ನಾಗಪ್ಪನಲ್ಲಿ ಉದ್ರಿ ತಂದದ್ದರಿಂದ ಅವನ ಖಾತೆಗೆ ಜಮೆ. ಖಾ. ಪಾ. ಪಾ. ನಂ. |
| ೭೫೦ ನಾಗಪ್ಪ ಬ್ಯಾಡಗಿ ಖಾತೆ:— ಇವರಲ್ಲಿ ಧೋತರ ಜೋಡು ೧೫೦, ದರ ೫ ರೂ. ಪ್ರ. ಉದ್ರಿ ತಂದದ್ದರಿಂದ ಇವರ ಖಾತೆಗೆ ಖರ್ಚು | ೧೨ ಖುದ್ದ ಖಾತೆ:— ಇದೇ ತಿಂಗಳ ಮನೆಯ ಬಾಡಿಗೆಯನ್ನು ಕೊಟ್ಟಿತು. ಖಾ. ಪಾ. ಪಾ. ನಂ. |

೧೫೦ ಬಂಗಾರದ ಖಾತೆ:—
ಬಂಗಾರ ತೊಲೆ ೨॥ ದರ ೬೦ ರೂ.
ಪ್ರ. ಮಾರಿತು.

| ಖಾ. ಪಾ. | ಪಾ. ನಂ. |
|---|---|

೧೫೦ ರೂ. ರೋಖು
೭೫೦ ರೂ. ಪರಭಾರೆ
೯೦೦
೨೧೦೦ ಅಂತೂ

೫೦೦ ಬಂಗಾರದ ಖಾತೆ:—
ಬಂಗಾರ ತೊಲೆ ೧೦ ದರ ೫೦ ರೂ.
ಪ್ರ. ಕೊಂಡಿತು.

| ಖಾ. ಪಾ. | ಪಾ. ನಂ. |
|---|---|

೫೧೨ ರೂ. ರೋಖು
೭೫೦ ರೂ. ಪರಭಾರೆ
೧೨೬೨ ರೂ. ಅಂತೂ
೮೩೮ ನಾಳಿನ ಶಿಲಕು
೨೧೦೦ ರೂ. ಅಂತೂ

ಎರಡು ಸಾವಿರದ ಒಂದುನೂರು ರೂಪಾಯಿಗಳು ಮಾತ್ರ.

ದಸ್ತೂರ. (ಬರೆದವರು) ಸಹಿ. (ಮಾಲಿಕರು)

ಇಲ್ಲಿ ೮೩೮ ರೂ. ಶಿಲಕು ಪರಭಾರೆ ಆಯಿತು. ಈ ರಕಮನ್ನು ಖರ್ಚಿನ ಕಡೆಗೆ ಬರೆದ ಕೂಡಲೆ ಎರಡೂ ಬೇರೀಜು (ಜಮೆ ಮತ್ತು ಖರ್ಚು) ಸರಿಯಾದವು. ಈ ರಕಮನ್ನು ಮರುದಿನ ಕೀರ್ದಿಯಲ್ಲಿ ಜಮೆಯ ಕಡೆಗೆ ಮೊದಲು ಬರೆಯಬೇಕು. ಹೀಗೆ ಬರೆಯುವಾಗ ಈ ದಿವಸ ೮೩೮ ರೂ. ಗಳನ್ನು ಕೊಟ್ಟಿತೆಂದೂ, ನಾಳಿನ ದಿವಸ ತೆಗೆದುಕೊಂಡಿತೆಂದೂ ಭಾವಿಸಿದಂತಾಗುವದು.

ಕೀರ್ದಿಯಲ್ಲಿ ಪ್ರತಿದಿನ ಜಮಾಖರ್ಚನ್ನು ಬರೆಯುವ ಮೊದಲ ಹಿಂದಿನ ದಿವಸದ ಶಿಲಕು ಎಂದು ಬರೆದು ಅದರ ಕೆಳಗೆ ═══════ ಹೀಗೆ ಜೋಡು ಗೆರೆಗಳನ್ನು ಎಳೆಯಬೇಕು. ಮುಂದೆ ಆ ದಿವಸದ ವ್ಯವಹಾರಗಳನು ಹಿಂದೆ ಹೇಳಿದಂತೆ ಬರೆಯುತ್ತ ಹೋಗಬೇಕು. ಇದೇ ಕ್ರಮದಿಂದ ಪ್ರತಿದಿನ್ನು ಜಮಾಖರ್ಚನ್ನು ಬರೆಯಬೇಕು.

ಉದಾ:— (೪) ಗೋಣೀ ಗುರಪ್ಪನ ಕೀರ್ದಿಯಲ್ಲಿ ತಾ. ೨—೩—೧೯೪೫ ನೇ ದಿವಸ ಕೆಳಗಿನ ವ್ಯವಹಾರಗಳನ್ನು ಬರೆದು ಶಿಲಕು ತೆಗೆಯಿರಿ.

೨೨೦೦ ರೂ. ಹಿಂದಿನ ರೋಖು ಶಿಲಕು. ಅಕ್ಕಿ ಮಣ ೮, ದರ ೫ ರೂ. ಪ್ರ., ಮತ್ತು ಜೋಳ ಮಣ ೨೦, ದರ ೩೩ ರೂ. ಪ್ರ. ಕಣವೀ ರಾಮಣ್ಣನಿಗೆ ಉದ್ರಿ. ಮಾರಿದನು. ಅದರಲ್ಲಿ ಅವನು ೫೦ ರೂ. ರೋಖು ಕೊಟ್ಟನು. ಗೋದಿ ಮಣ ೧೬ ದರ ೫। ರೂ. ಪ್ರಕಾರ ಮಾರಿದನು. ತೊಗರೀಬೇಳೆ ಮಣ ೨೮, ದರ ೪ ರೂ. ಪ್ರ. ಮಾರಿದನು. ಧಾರವಾಡ ನಾಗಪ್ಪನಲ್ಲಿ ಕಡಲೆ ಮಣ ೨೦೦, ದರ ೩ ರೂ. ೧೨ ಆ. ಪ್ರ., ಮತ್ತು ಗೋದಿ ಮಣ ೧೬೦, ದರ ೩ ರೂ ಪ್ರ. ಕೊಂಡು ೬೦೦ ರೂ. ರೋಖು ಕೊಟ್ಟನು. ೮೨ ರೂ. ರೇಲ್ವೆ ಬಾಡಿಗೆ ೨೫ ರೂ. ಚಕ್ಕಡಿಯ ಬಾಡಿಗೆ ಕೊಟ್ಟನು. (೯೦ ತೊಲಿ=೧ ಸೇರು, ೬೪ ಸೇರು=೧ ಮಣ)

## ಗೋಣೀ ಗುರಪ್ಪನ ಕೀರ್ದಿ.

ತಾ. ೨—೩—೧೯೪೫ ಇ.

ಜಮೆ —————— ರೂ.

೨೨೦೦ ಹಿಂದಿನ ಶಿಲಕು

---

೪೦ ಅಕ್ಕಿಯ ಖಾತೆ:—
ಕಣವೀ ರಾಮಣ್ಣನಿಗೆ ಅಕ್ಕಿ ಮಣ ೮ ದರ ೫ ರೂ. ಪ್ರ. ಉದ್ದರೀ ಮಾರಿದ್ದರಿಂದ ಅವನ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

---

೭೫ ಜೋಳದ ಖಾತೆ:—
ಕಣವೀ ರಾಮಣ್ಣನಿಗೆ ಜೋಳ ಮಣ ೨೦ ದರ ೩ ರೂ. ೧೨ ಆ. ಪ್ರ. ಮಾರಿದ್ದರಿಂದ ಅವನ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

---

೮೪ ಗೋದಿಯ ಖಾತೆ:—
ಗೋದಿ ಮಣ ೧೬ ದರ ೫ ರೂ. ೪ ಆ. ಪ್ರ. ಮಾರಿತು.
ಖಾ. ಪಾ. ಪಾ. ನಂ.

---

೧೧೨ ತೊಗರಿಬೇಳೆ ಖಾತೆ:—
ತೊಗರಿಬೇಳೆ ಮಣ ೨೮ ದರ ೪ ರೂ ಪ್ರ. ರೋಖು ಮಾರಿತು.
ಖಾ. ಪಾ. ಪಾ. ನಂ.

---

೬೩೦ ಧಾರವಾಡ ನಾಗಪ್ಪನ ಖಾತೆ:
ತಪಶೀಲು:—
೭೫೦ ರೂ. ಕಡಲೆ ಮಣ ೨೦೦ ದರ ೩ ರೂ. ೧೨ ಆ. ಪ್ರ.

ಖರ್ಚು —————— ರೂ.

೬೫ ಕಣವೀ ರಾಮಣ್ಣನ ಖಾತೆ:—
ತಪಶೀಲು—
೪೦ ರೂ. ಅಕ್ಕಿ ಮಣ ೮ ದರ ೫ ರೂ. ಪ್ರ.
೭೫ ರೂ. ಜೋಳ ಮಣ ೨೦ ದರ ೩ ರೂ. ೧೨ ಆಣೆ ಪ್ರ.
೧೧೫ ಅಂತೂ
೫೦ ರೂ. ರೋಖು ಬಂದದ್ದು
೬೫ ರೂ ಬಾಕಿ
ಖಾ. ಪಾ. ಪಾ. ನಂ.

---

೭೫೦ ಕಡಲೆಯ ಖಾತೆ:—
ಕಡಲೆ ಮಣ ೨೦೦ ದರ ೩ ರೂ. ೧೨ ಆ. ಪ್ರ. ಧಾರವಾಡ ನಾಗಪ್ಪನಲ್ಲಿ ಉದ್ದರೀ ತಂದದ್ದರಿಂದ ಅವನ ಖಾತೆಗೆ ಜಮೆ.
ಖಾ. ಪಾ. ಪಾ. ನಂ.

---

೪೮೦ ಗೋಧಿಯ ಖಾತೆ:—
ಗೋದಿ ಮಣ ೧೬೦ ದರ ೩ ರೂ. ಪ್ರಕಾರ ಧಾರವಾಡ ನಾಗಪ್ಪನಲ್ಲಿ ಉದ್ದರೀ ತಂಡದ್ದರಿಂದ ಅವನ ಖಾತೆಗೆ ಜಮೆ.
ಖಾ. ಪಾ. ಪಾ. ನಂ.

---

೧೦೫ ಬಾಡಿಗೆ ಖಾತೆ:—
ಧಾನ್ಯ ತರುವಾಗ ಬಾಡಿಗೆ ಬಿದ್ದ
ತಪಶೀಲು—
೮೦ ರೂ ರೇಲ್ವೆ ಬಾಡಿಗೆ

೪೮೦ ಗೋದಿ ಮಣ ೧೬೦ ದರ
    ೩ ರೂ. ಪ್ರ.

---

೧೨೩೦ ಅಂತೂ
೬೦೦ ರೋಖು ಕೊಟ್ಟಿದ್ದು.

---

೬೩೦ ರೂ. ಬಾಕಿ

ಖಾ. ಪಾ.    ಪಾ. ನಂ.

---

೨೪೬ ರೂ. ರೋಖು
೬೯೫ ರೂ. ಪರಭಾರೆ

---

೯೪೧ ಅಂತೂ

---

೩೧೪೧ ಅಂತೂ

೨೫ ರೂ. ಅಕ್ಕಿಯ ಬಾಡಿಗೆ.

---

೧೦೫ ರೂ. ಅಂತೂ

ಖಾ. ಪಾ.    ಪಾ. ನಂ.

---

೭೦೫ ರೂ. ರೋಖು
೬೯೫ ರೂ. ಪರಭಾರೆ

---

೧೪೦೦ ಅಂತೂ
೧೭೪೧ ನಾಳಿನ ಶಿಲಕು

---

೩೧೪೧ ಅಂತೂ

ಅಂತೂ ಮೂರು ಸಾವಿರ ಒಂದು ನೂರು ನಾಲ್ವತ್ತೊಂದು ರೂಪಾಯಿಗಳು ಮಾತ್ರ,
ದಸ್ತೂರ. (ಬರೆದವರು)    ಸಹಿ. (ಮಾಲಕರು)

**೪. ಬೈಠೀಕೀರ್ದಿಯ ಪ್ರಾರಂಭ ಮತ್ತು ಶಿಲಕು ತೆಗೆಯುವದು:**—ಬೈಠೀಕೀರ್ದಿಯನ್ನು ಬರೆಯುವ ನಮೂನೆಯಾದರೂ ಬಹಳವಾಗಿ ರೋಜಕೀರ್ದಿಯನ್ನು ಬರೆಯುವ ನಮೂನೆಯಂತೆಯೇ ಇರುತ್ತದೆ. ಆದರೆ ಬೈಠೀಕೀರ್ದಿಯಲ್ಲಿ ಮೊದಲಿಗೆ ಮಿತಿಯ (ತಾರೀಖು)ನ್ನು ಹಾಕದೆ, ವ್ಯವಹಾರದ ತಪಶೀಲನ್ನು ಬರೆದು ಅದರ ಮುಂದೆ ಮಿತಿ (ತಾರೀಖು) ಹಾಕುವರು. ಈ ಕೀರ್ದಿಯನ್ನು ಸ್ವಲ್ಪ ವ್ಯವಹಾರವುಳ್ಳವರು ಇಡುವರು.

ಉದಾ:—(೫). ಕೆಳಗಿನ ವ್ಯವಹಾರಗಳನ್ನು ಅಂಗಡಿ ಶಿವಪ್ಪನ ಬೈಠೀಕೀರ್ದಿಯಲ್ಲಿ ಬರೆದು ಶಿಲಕು ತೆಗೆಯಿರಿ.

೧೫೦ ರೂ. ಜನೇವರಿ ತಿಂಗಳ ಪಗಾರವು ಬಂದಿತು. ತಾ. ೧—೨—೫೪.
೧೦ ರೂ. ಮನೆಯ ಬಾಡಿಗೆಯನ್ನು ಕೊಟ್ಟಿತು. ತಾ. ೨
೩೫ ರೂ. ಕಂಪನೀ ಅಂಗಡಿಯಲ್ಲಿ ರುಮಾಲು ೧, ದರ ೩೫ ರೂ. ಪ್ರ. ಕೊಂಡು
    ೨೦ ರೂ. ರೋಖು ಕೊಟ್ಟಿತು. ತಾ. ೪
೨೫ ರೂ. ಆಸಿಗೆ ಕೈಗಡ ಕೊಟ್ಟಿತು. ತಾ. ೬
೨೦೦ ರೂ. ಮೇಟಿ ರಾಮಣ್ಣನ ಕಡೆಯಿಂದ ಹೊಲದ ಲಾವಣಿ ಬರತಕ್ಕದ್ದು

ಬಂದ ವಿವರ. ತಾ. ೧೦

೨೫ ರೂ. ಸರಕಾರದ ಹಪ್ತೆ (ತಿಂಗೆ) ಕೊಟ್ಟು ಉಳಿದ ಹಣಕ್ಕೆ ಭತ್ತ ಮಣ ೪೦, ದರ ೩ ರೂ. ೧೨ ಆಣೆ ಪ್ರ. ತೊಗರೆಯ ಬೇಳೆ ಮಣ ೪, ದರ ೫ ರೂ. ಪ್ರ., ೫ ರೂ. ಬಾಡಿಗೆಯ ಬಗ್ಗೆ ಖರ್ಚಾದದ್ದು.

೪ ಧಾರವಾಡದ ನಾಗಪ್ಪನಲ್ಲಿ ಸಕ್ಕರೆ ಮಣ ಅರ್ಧ, ದರ ೬ ರೂ. ಪ್ರ., ಮತ್ತು ಚಹದ ಡಬ್ಬಿ ೧, ದರ ೧ ರೂ. ಪ್ರ. ತಂದನು. ತಾ. ೧೧

ಇಲ್ಲಿ ೬ ದಿವಸಗಳ ಜಮಾಖರ್ಚನ್ನು ಬರೆಯುವದಿರುವದು. ಪ್ರತಿ ದಿವಸದ ಜಮಾ ಖರ್ಚನ್ನು ರೋಜಕೀರ್ದಿಯಲ್ಲಿ ಬರೆದಂತೆಯೇ ಬರೆಯಬೇಕು. ಹೇಗಂದರೆ:-

## ಅಂಗಡಿ ಶಿವಪ್ಪನ ಬೈಠೀಕೀರ್ದಿ

ತಾ. ೧—೨—೪೫ ಇ. ಯಿಂದ ೧೧—೨—೪೫ ವರೆಗೆ

ಜಮೆ ———— ರೂ.

೧೫೦ ಪಗಾರ ಖಾತೆ:—
ಜನೇವರಿ ತಿಂಗಳ ಪಗಾರ ಬಂದದ್ದು. ತಾ. ೧
ಖಾ. ಪಾ. ಪಾ. ನಂ.

೧೫ ಕಂಪನಿಯ ಅಂಗಡಿಯ ಖಾತೆ:
೩೫ ರೂ. ರುಮಾಲ ೧ ತಂದು
೨೦ ರೂ. ರೋಖ ಕೊಟ್ಟಿತು.
೧೫ ರೂ. ಬಾಕಿ ತಾ. ೪
ಖಾ. ಪಾ. ಪಾ ನಂ.

೨೦೦ ಮೋಟೆ ರಾಮಣ್ಣನ ಖಾತೆ:-
ತಪಶೀಲು—
೨೫ ರೂ. ಸರಕಾರೀ ಹಪ್ತೆ ಕೊಟ್ಟದ್ದು.
೧೫೦ ರೂ. ಭತ್ತ ಮಣ ೪೦ ದರ ೩ ರೂ. ೧೨ ಆಣೆ ಪ್ರ.
೨೦ ರೂ. ತೊಗರೆಯ ಬೇಳೆ ಮಣ ೪ ದರ ೫ ರೂ. ಪ್ರ.

ಖರ್ಚು ———— ರೂ

೧೦ ಮನೆಯ ಬಾಡಿಗೆ ಖಾತೆ:—
ಬಾಡಿಗೆಯನ್ನು ಕೊಟ್ಟದ್ದು ತಾ. ೨
ಖಾ. ಪಾ. ಪಾ. ನಂ.

೩೫ ಜವಳಿಯ ಖಾತೆ:—
ಕಂಪನೀ ಅಂಗಡಿಯಲ್ಲಿ ೧ ರುಮಾಲವನ್ನು ತಂದು ೨೦ ರೂ. ರೋಖ ಕೊಟ್ಟದ್ದರಿಂದ ೧೫ ರೂ. ಆ ಖಾತೆಗೆ ಜಮೆ. ತಾ. ೪
ಖಾ. ಪಾ. ಪಾ. ನಂ.

೨೫ ಅನ ಖಾತೆ:—
ಅನಿಗೆ ಕೈಗಡ ಕೊಟ್ಟದ್ದು. ತಾ. ೪
ಖಾ. ಪಾ. ಪಾ. ನಂ.

೨೫ ಲಾವಣಿ ಖಾತೆ:—
ಸರಕಾರೀ ಹಪ್ತೆಯನ್ನು ಕೊಟ್ಟದ್ದರಿಂದ ಮೋಟೇ ರಾಮಣ್ಣನ ಖಾತೆಗೆ ಜಮೆ. ತಾ. ೧೦
ಖಾ. ಪಾ. ಪಾ. ನಂ.

೫ ರೂ. ಧಾನ್ಯ ತರಲಿಕ್ಕೆ
ಚಕ್ಕಡಿಯ ಬಾಡಿಗೆ

೨೦೦ ರೂ. ಆ ಆ ಖಾತೆಗಳಿಗೆ
ಖರ್ಚು ಶಾ. ೧೦
ಖಾ. ಪಾ. ಪಾ. ನಂ.

೪ ಧಾರವಾಡ ನಾಗಪ್ಪನ ಖಾತೆ–
ತಪಶೀಲು—
ಸಕ್ಕರೆ ಮಣ ಅರ್ಧ ದರ ೬ ರೂ.
ಪ್ರ. ಚಹದ ಡಬ್ಬಿ ೧ ದರ ೧ ರೂ.
ಪ್ರಕಾರ ಉದ್ದರಿ ತಂದದ್ದರಿಂದ
ಕಿರಾಣಿ ಖಾತೆಗೆ ಖರ್ಚು ಶಾ. ೧೧
ಖಾ. ಪಾ. ಪಾ. ನಂ.

೧೫೦ ರೂ. ರೋಖು
೨೧೯ ರೂ. ಪರಭಾರೆ

೩೬೯ ರೂ. ಅಂಕೂ

೩೬೯

೧೬೦ ಧಾನ್ಯ ಖಾತೆ:—
ಹೊಲದ ಲಾವಣಿಯು ಹಣದಲ್ಲಿ
ಕೆಳಗಿನ ಧಾನ್ಯ ಬಂದದ್ದರ ವಿವರ
೧೫೦ ರೂ. ಭತ್ತ ಮಣ ೪೦ ದರ
೩ ರೂ. ೧೨ ಆಣೆ
೨೦ ರೂ. ತೊಗರಿಬೇಳೆ, ಮಣ
೪ ದರ ೫ ರೂ. ಪ್ರ.

೧೬೦ ರೂ. ರಾಮಣ್ಣನ ಖಾತೆಗೆ
ಜಮೆ. ಶಾ. ೧೦
ಖಾ. ಪಾ. ಪಾ. ನಂ.

೫ ಬಾಡಿಗೆಯ ಖಾತೆ:—
ಹೊಲದ ಲಾವಣಿಯು ಹಣದಲ್ಲಿ
ಬಂದ ಧಾನ್ಯ ತರುವಾಗ ಬಾಡಿಗೆ
ಬಿದ್ದದ್ದರಿಂದ ರಾಮಣ್ಣನ ಖಾತೆಗೆ
ಜಮೆ. ಶಾ. ೧೦
ಖಾ. ಪಾ. ಪಾ. ನಂ.

೪ ಕಿರಾಣಿ ಖಾತೆ:—
ಧಾರವಾಡ ನಾಗಪ್ಪನಲ್ಲಿ ಸಕ್ಕರೆ
ಮಣ ಅರ್ಧ ದರ ೬ ರೂ. ಪ್ರ.
ಉದ್ದರಿ ತಂದದ್ದರಿಂದ ಅವನ
ಖಾತೆಗೆ ಜಮೆ. ಶಾ. ೧೧
ಖಾ. ಪಾ. ಪಾ. ನಂ.

೫೫ ರೋಖು
೨೧೯ ಪರಭಾರೆ

೨೭೪ ಅಂಕೂ
೯೫ ನಾಳಿನ ಶಿಲಕು

೩೬೯ ಅಂಕೂ

ಅಂಕೂ ಮೂರು ನೂರು ಅರವತ್ತೊಂಬತ್ತು ರೂಪಾಯಿಗಳು ಮಾತ್ರ

ದಸ್ತೂರ. (ಬರೆದವರು) ಸಹಿ. ಮಾಲಕರು

೫ ಪ್ರಶ್ನೆಗಳು :—

೧ ಕೀರ್ದಿ ಅಂದರೇನು? ಅದರಲ್ಲಿ ಎಷ್ಟು ಪ್ರಕಾರಗಳು?

೨ ರೋಜಕೀರ್ದಿ ಮತ್ತು ಬೈಠೀಕೀರ್ದಿ ಅಂದರೇನು?

೩ ರೋಜಕೀರ್ದಿಯ ಶಿಲಕು ತೆಗೆಯುವದು ಹೇಗೆ? ಯಾಕೆ?

೪ ರೋಜಕೀರ್ದಿಯನ್ನು ಯಾರು ಉಪಯೋಗಿಸುವರು? ಬೈಠೀಕೀರ್ದಿಯನ್ನು?

೫ ಪ್ರತಿದಿವಸದ ವ್ಯವಹಾರಗಳನ್ನು ಕೀರ್ದಿಯಲ್ಲಿ ಬರೆದಿರುವೆವೆಂಬದನ್ನು ಹೇಗೆ ಗೊತ್ತು ಮಾಡುವಿರಿ? ಪರಭಾರೆ ರಕಮನ್ನು ಬರೆಯುವದನ್ನು ಮರೆತರೆ ಯಾವಾಗ್ಗೆ ಗೊತ್ತಾಗುವದು? ಹೇಗೆ?

೬ ಕೀರ್ದಿಯ ಉಪಯೋಗವೇನು?

ಕೆಳಗಿನ ವ್ಯವಹಾರಗಳನ್ನು ನಿಮ್ಮ ಬೈಠೀಕೀರ್ದಿಯಲ್ಲಿ ಬರೆದು ಶಿಲಕು ತೆಗೆಯಿರಿ.

೭ ತಾ. ೩—೨—೪೫ನೆಯ ದಿನ ೫೦ ರೂ. ಜನವರಿ ತಿಂಗಳ ಪಗಾರ ಬಂದಿತು. ತಾ. ೫ ಜೋಳ ೨ ರೂ. ಬೇಳೆ ೧ ರೂ. ಅಕ್ಕಿ ೨ ರೂ. ಗೋದಿ ೮ ಅ. ಯದು ಖರೀದಿ ಮಾಡಿತು. ತಾ. ೭ ಸಿನೇಮಾ ತಿಕೀಟಿಗೆ ೪ ಆಣೆ ಕೊಟ್ಟಿತು. ತಾ. ೧೦ ರೇವಪ್ಪನು ಕೈಗಡ ಇಸಗೊಂಡಿದ್ದ ೫ ರೂ. ತಂದು ಕೊಟ್ಟನು. ತಾ. ೧೩ ನೆರೆಮನೆಯ ಗಂಗಪ್ಪನಿಗೆ ೨ ರೂ. ಯ ಧೋತರ ಜೋಡನ್ನು ಜಯಚಂದ ಮಾರವಾಡಿಯಲ್ಲಿ ಉದ್ರಿ ಕೊಡಿಸಿತು. ತಾ. ೧೪ ಅಣ್ಣನ ಕಡೆಯಿಂದ ಬಂದ ೧೦ ರೂ. ಬ್ಯಾಂಕಿಗೆ ಕಳಿಸಿತು. ತಾ. ೨೫ ೧ ರೂ. ಖಜವನ್ನು ಕೊಂಡಿತು. ತಾ. ೩೦ ೧ ರೂ. ವರ್ತಮಾನಪತ್ರದ ವರ್ಗಣಿ ಕೊಟ್ಟಿತು.

೮ ತಾ. ೧—೩—೪೫ ಪಗಾರ ೩೫ ರೂ. ಬಂದಿತು. ತಾ. ೨ ಭತ್ತದ ಗದ್ದೆಯ ಲಾವಣಿ ೫೦ ರೂ. ಬಂದಿತು. ತಾ. ೧೨ ಶಿವರಾತ್ರಿಯ ದಿವಸ ಗೋಕರ್ಣಕ್ಕೆ ಹೋಗುವದಕ್ಕೆ ಮೋಟಾರ ಖರ್ಚು ೨ ರೂ. ಫಲಹಾರದ ಖರ್ಚು ೧ ರೂ. ಬಾದಿತು. ತಾ. ೧೫ ರಂಗಪ್ಪನಿಗೆ ೨ ರೂ. ಕೈಗಡ ಕೊಟ್ಟಿತು. ತಾ. ೧೮ ಮಗನಿಗೆ ೫ ರೂ. ಕೊಟ್ಟು ಕೋಟು ಹೊಲಿಸಿತು. ತಾ. ೨೨ ಹೊಲದ ಹಪ್ತೆ ೧೦ ರೂ. ಕೊಟ್ಟಿತು. ತಾ. ೨೬ ಬಾಳೆಹಣ್ಣು, ಖರ್ಜೂರ ೧೨ ಆಣೆಯದು ತಂದಿತು.

೯ ತಾ. ೫—೪—೪೫ ಪಗಾರ ೭೫ ರೂ. ಬಂದಿತು. ತಾ. ೫ ಸಾಯಕಲ್ಲಿಗೆ ೫೦ ರೂ. ಕೊಟ್ಟಿತು. ತಾ. ೭ ಮಗನ ಪರೀಕ್ಷೆ ಪಾಸಾದ್ದರಿಂದ ೨ ರೂ. ಪೇಡೆ ಹಂಚಿತು. ತಾ. ೧೦ ತಮ್ಮನಿಗೆ ೧೭ ರೂ. ಬಂಗಾರದ ಉಂಗುರವನ್ನು ಮಾಡಿಸಿತು ತಾ. ೧೫ ಹೋಳಿಹುಣ್ಣವೆಗೆ ಸಕ್ಕರೆಸರ ೪, ದರ ೪ ಆಣೆ ಪ್ರ. ಮತ್ತು ಹಲಿಗೆ ಒಂದು, ದರ ೧ ಆಣೆ ೬ ಪೈ ಪ್ರ. ಖುಷಿ ೧೨ ಆಣೆ ಕೊಟ್ಟಿತು.

೧೦ ತಾ. ೫-೪-೪೫ ಬಡ್ಡಿ ೫೦ ರೂ. ಬಂದಿತು. ತಾ. ೮ ೪ ರೂ. ಕೆಲಸ್ಸು ಹುಡುಗನ ಪಗಾರಗೆ ಕೊಟ್ಟಿತು. ತಾ. ೧೦ ಬೆಳ್ಳಿ ಬಟ್ಟಲ ೭ ರೂ. ಗೆ ಕೊಂಡಿತು. ತಾ. ೧೪ ಶಾಂತಾಬಾಯಿಗೆ ಮೋಜವಾನಿ ಮಾಡಿಸಿದ ಖರ್ಚು ೪ ರೂ. ಬಂದಿತು. ತಾ. ೧೪ ಹನುಮಂತದೇವರ ಜಾತ್ರೆಗೆ ೨ ರೂ. ಪಟ್ಟಿ ಕೊಟ್ಟಿತು. ತಾ. ೧೬, ೫ ರೂ. ಗೆ ಗೋಧಿ ಕೊಂಡಿತು. ತಾ. ೨೦ ೫ ರೂ. ಬಜಂತ್ರಿ ಖರ್ಚು ಕೊಟ್ಟಿತು.

ಗಂಗಕ್ಕನ ಮೇ ತಿಂಗಳ ಜೈರೋಜಕೀರ್ದಿ

೧೧ ತಾ. ೧ ಗಂಡನು ೧೦೦ ಕೊಟ್ಟನು. ತಾ. ೪ ಆಚಾರ್ಯರಿಗೆ ೧ ರೂ. ದೇಶಾವರಿ ಕೊಟ್ಟಳು. ತಾ. ೪ ಅಕ್ಕಿ ೬ ರೂ. ತೊಗರಿಬೇಳೆ ೨ ರೂ. ಗೋದಿ ೧ ರೂ. ಕಡ್ಲಿಬೇಳೆ ೧ ರೂ. ಯವು ತರಿಸಿದಳು. ತಾ. ೬ ಮಕ್ಕಳಿಗೆ ಬಳೆ ಇಡಿಸಿದ ಬಗ್ಗೆ ೨ ರೂ. ಕೊಟ್ಟಳು. ತಾ. ೧೦ ಮನೆಯವರಿಗೆಲ್ಲ ಸಿನೇಮಾ ಟಿಕೇಟಿನ ಖರ್ಚು ೨ ರೂ. ಬಂದಿತು. ತಾ. ೧೨ ರಂಗೂಬಾಯಿಗೆ ೫ ರೂ. ಕೈಗಡ ಕೊಟ್ಟಳು. ತಾ. ೧೪ ತೆಂಗಿನಕಾಯಿ ೨ ತುಳಸಾಬಾಯಿಗೆ ಕೈಗಡ ಕೊಟ್ಟಳು. ತಾ. ೧೬ ಅಂಗಡಿಕಾರ ರಾಚಯ್ಯನಲ್ಲಿ ೮ ರೂ. ಕಿರಾಣಿ ಸಾಮಾನು ತರಿಸಿದಳು. ತಾ. ೨೦ ಹಿರಿಯ ಮಗನಾದ ರಂಗನ ಸ್ಕೌಟ ಡ್ರೆಸ್ಸಿಗೆ ೬ ರೂ. ಖರ್ಚಾದವು. ತಾ. ೨೫ ಗುಡಿಗೆ ಹೋಗಲಿಕ್ಕೆ ಟಾಂಗಾ ಬಾಡಿಗೆ ೬ ಆಣೆ ಕೊಟ್ಟಳು. ತಾ. ೨೮ ಮತ್ತೆ ಗಂಡನ ಕಡೆಯಿಂದ ೧೮ ರೂ. ಇಸಗೊಂಡಳು. ತಾ. ೩೦ ಉಳಿದ ರೂ ಬ್ಯಾಂಕಿಗೆ ಕಳಿಸಿದಳು.

ಕೆಳಗಿನ ವ್ಯವಹಾರಗಳನ್ನು ಬರೆದು ಶಿಲಕು ತೆಗೆಯಿರಿ.

೧೨ ತಾ. ೨-೨-೪೫ನೆಯ ದಿವಸ ಅನ ರೋಜಕೀರ್ದಿಯಲ್ಲಿ—೫೦೦ ರೂ. ರೋಖು ಹಣವನ್ನು ಹಾಕಿ ವ್ಯಾಪಾರವನ್ನು ಪ್ರಾರಂಭಿಸಿದನು. ಮಾಂಜರಪಾಟು ಥಾನು ೧೫ ದರ ೨೦ ರೂ. ಪ್ರ ಕೇಶವರಾವ ನಾಡಿಗೇರ ಇವರಲ್ಲಿ, ಉಣ್ಣೆಯ ಅರಿವೆ ವಾರ (ಯಾರ್ಡ) ೨೫, ದರ ೮೦ ರೂ. ಪ್ರ ಧಾರವಾಡ ಕಾಪಸಿ ಅಂಗಡಿಯಲ್ಲಿ ಉದ್ಧರಿ ತಂದನು.

೧೪ ತಾ. ೧೦-೪-೪ನೆ ಇ. ದಿವಸದ ಬಂಗಾರಿ ಬಸಪ್ಪನ ರೋಜಕೀರ್ದಿ:— ೬೦೦೦ ರೂ ಹಾಕಿ ವ್ಯಾಪಾರವನ್ನು ಪ್ರಾರಂಭಿಸಿದನು. ಅಂಗಡಿಯ ಉಪಯೋಗಕ್ಕೆ ಜಮಖಾನೆ ೧, ದರ ೨೫ ರೂ ಪ್ರ, ಸಮೆ ೧, ದರ ೪ ರೂ ಪ್ರ, ಕಂಬಳಿಗಳು ೪, ದರ ೫ ರೂ, ಪ್ರ, ಖರೀದಿ ಮಾಡಿದನು. ಜೋಳ ಮಣ ೧೨೦, ದರ ೮ ರೂ, ಪ್ರ, ಖರೀದಿ ಮಾಡಿದನು. ಕಡಲೆ ಮಣ ೨೦೦ ದರ ದರ ೪ ರೂ. ೮ ಆ. ಪ್ರ. ಸೆಟ್ಟರ ಶಂಕರಪ್ಪನಲ್ಲಿ ಉದ್ಧರೀ ಖರೀದಿ ಮಾಡಿದನು. ಜೋಳ ಮಣ ೬೦, ದರ ೧೦ ರೂ, ಪ್ರ, ಕೋಮಟಿ ಕಾಂತಪ್ಪನಿಗೆ ಮಾರಿದನು, ೨೫ ರೂ. ಅಂಗಡಿಯ ಬಾಡಿಗೆಯನ್ನು ಮುಂಗಡ ಕೊಟ್ಟನು. ತನ್ನ ಶಿಪಾಯಿಗೆ ೫ ರೂ. ಯ ಕೋಟನ್ನು ಹೊಲಿಸಿಕೊಟ್ಟನು. (೭೨ ತೊಲೆಗಳು=೧ ಶೇರು; ೬೪ ಶೇರುಗಳು=೧ ಮಣ; ೨ ಮಣ=೧ ಪಾಪು (ಚೀಲ))

# ಮೂರನೆಯ ಪ್ರಕರಣ

## ಖತಾವಣಿಯೂ ಪಠಾಣವಹಿಯೂ

೧. ಖಾತೆಯ ಉದ್ದೇಶ. ೨. ಖಾತೆಯ ವಹಿಯು:— (೧) ಖತಾವಣಿ, (೨) ಪಠಾಣವಹಿ. ೩. ಖಾತೆಗಳು:—(ಅ) ಇಸಮಿನ ಖಾತೆ, (ಬ) ಜೀನಸಿನ ಖಾತೆ, (ಕ) ಬಾಬಿನ ಖಾತೆ. ೪. ಖತಾವಣಿಯ ಬರೆಹದ ಕ್ರಮ. ೫. ಖತಾವಣಿಯ ಉಪಯೋಗ. ೬. ಪಠಾಣವಹಿಯ ಬರೆಹದ ಕ್ರಮ. ೭. ಪ್ರಶ್ನಗಳು.

೧. ಖಾತೆಯ ಉದ್ದೇಶ:— ಕೀರ್ದಿಯ ಮೇಲಿಂದ ಪ್ರತಿದಿವಸದ ವ್ಯವಹಾರಗಳ ರಕಮುಗಳೂ ಶಿಲಕೂ ತಿಳಿಯುತ್ತವೆ. ಆದರೆ ಕೊಡಕೊಳ್ಳುವದೂ ಜೀನಸುಗಳ ಮಾರಾಟದಿಂದಾದ ಲಾಭಹಾನಿಗಳೂ ಒಂದೇ ಕಡೆಯಲ್ಲಿ ಸಿಗುವದಿಲ್ಲ ಈ ಸಂಗತಿಗಳು ಬೇಕಾದಾಗ ಸ್ಪಷ್ಟವಾಗಿ ತಿಳಿಯಬೇಕಾದರೆ ಕೀರ್ದಿಯಲ್ಲಿ ಬರೆದಿಟ್ಟ ವ್ಯವಹಾರಗಳನ್ನೇ (ಪರಿಣಾಮಗಳನ್ನೇ) ಖಾತೇವಾರ ವಿಲೇವಾರಿ ಮಾಡಿ ಬರೆಯಬೇಕಾಗುವದು. ಹೀಗೆ ಬರೆದಿಟ್ಟರೆ ವರ್ಷಾಂತ್ಯಕ್ಕೆ ಬೇಕಾಗುವ ಲೆಕ್ಕವನ್ನು ಬಹು ಸುಲಭವಾಗಿ ಮಾಡಲಿಕ್ಕೆ ಬರುತ್ತದೆ

೨. ಖತಾವಣಿಗಳು ಎರಡು ತರದವು:— (೧) ಖತಾವಣಿ, (೨) ಪಠಾಣವಹಿ.

(೧) ವ್ಯವಹಾರಗಳ ಗೋಷವಾರೆಯನ್ನು ಬರೆದಿಡುವ ಖಾತೆಗಳ ವಹಿಗೆ ಖತಾವಣಿ ಅನ್ನುವರು.

(೨) ವ್ಯವಹಾರಗಳ ತಪಶೀಲನ್ನೂ ಸಹ ಬರೆದಿರುವ ಖಾತೆಗಳ ವಹಿಗೆ ಪಠಾಣವಹಿಯೆನ್ನುವರು.

೩. ಖಾತೆಗಳಲ್ಲಿ ಮೂರು ಪ್ರಕಾರಗಳು:— (ಅ) ಇಸಮಿನ ಖಾತೆಗಳು. (ಬ) ಜೀನಸಿನ ಖಾತೆಗಳು. (ಕ) ಬಾಬಿನ ಖಾತೆಗಳು.

(ಅ) ಒಬ್ಬ ಮನುಷ್ಯನ ಅಥವಾ ಒಂದು ಸಂಘದ ಸಂಬಂಧದ ವ್ಯವಹಾರಗಳನ್ನು ತೋರಿಸುವ ಖಾತೆಗಳಿಗೆ ಇಸಮಿನ ಖಾತೆಗಳೆನ್ನುವರು.

ಉದಾ:— ನಾಗಪ್ಪನ ಖಾತೆ; ಮಲ್ಲಪ್ಪನ ಖಾತೆ, ಬ್ಯಾಂಕಿನ ಖಾತೆ, ಕಂಪನಿಯ ಖಾತೆ ಮುಂತಾದವುಗಳು.

(ಬ) ಜೀನಸುಗಳ ಮತ್ತು ಆಸ್ತಿಗಳ ಸಂಬಂಧದ ವ್ಯವಹಾರಗಳನ್ನು ತೋರಿಸುವ ಖಾತೆಗಳಿಗೆ ಜೀನಸಿನ ಖಾತೆಗಳೆನ್ನುವರು.

ಉದಾ:— ಜವಳಿಯ ಖಾತೆ, ಧಾನ್ಯದ ಖಾತೆ, ಹೊಲ, ಮನೆ, ಠೇವು, ಹುಂಡಿ ಮೊದಲಾದ ಖಾತೆಗಳು.

(ಕ) ಖರ್ಚಿನ ಮತ್ತು ಉತ್ಪನ್ನದ ವ್ಯವಹಾರಗಳನ್ನು ತೋರಿಸುವ ಖಾತೆಗಳಿಗೆ ಬಾಬಿನ ಖಾತೆಗಳೆನ್ನುವರು.

ಉದಾ:— ಬಾಡಿಗೆ, ದಲಾಲಿ, ಸೂಟ, ಧರ್ಮಾದಾಯ ಮುಂತಾದ ಖಾತೆಗಳು.

ಖಾತೆಗಳ ಸಂಖ್ಯೆಯು ಬೇಕಾದಷ್ಟಿರಬಹುದಾದರೂ, ಅವು ಮೇಲೆ ಹೇಳಿದ ಮೂರೇ ವರ್ಗಗಳಲ್ಲಿ ಸೇರುವವು.

೪. **ಖಾತೆಗಳ ಬರೆಹದ ಕ್ರಮ:**— ವ್ಯವಹಾರಗಳನ್ನು ಮೊದಲು ಕೀರ್ದಿಯಲ್ಲಿ ಬರೆಯದೆ ಖಾತೆಯಲ್ಲಿ ಎಂದೂ ಬರೆಯಬಾರದು. ಕೀರ್ದಿಯಲ್ಲಿ ಯಾವ ಕಡೆಗೆ ರಕಮುಗಳು ಬಂದಿರುತ್ತವೆಯೋ ಅವು ಖಾತೆಯಲ್ಲಿಯಾದರೂ ಅದೇ ಕಡೆಗೆ ಬರುತ್ತವೆ. ಖತಾವಣಿಯಲ್ಲಿ ಖಾತೆಗಳ ಹೆಸರನ್ನು ಪಾನಿನ ಮಧ್ಯದಲ್ಲಿ ಬರೆಯಬೇಕು. ಉದಾ:— ಜೋಳದ ಖಾತೆ, ಇಸಮಿನ ಖಾತೆ, ಇದ್ದರೆ ಮೊದಲು ಖಾತೆ ಎಂದು ಬರೆದು, ಅದರ ಮುಂದೆ ಹೆಸರು-ಪತ್ತೆ-ಇರುವ ಊರು ಇವುಗಳನ್ನು ಬರೆಯಬೇಕು. ಉದಾ:— ಖಾತೆ-ಸಂಗಪ್ಪ ಸವದಿ, ಹಾವೇರಿಪೇಟೆ, ಧಾರವಾಡ. ಇದರ ಕೆಳಗೆ ಪಾನಿನ ಎಡಗಡೆಯ ಅರ್ಧದ ಆರಂಭಕ್ಕೆ ಜಮೆ ಎಂದೂ, ಬಲಗಡೆಯ ಅರ್ಧದ ಆರಂಭಕ್ಕೆ ಖರ್ಚು ಎಂದೂ ಬರೆದು ಮುಂದೆ ಗೆರೆ ತೆಗೆದು ಕೊನೆಗೆ ರೂ. ಎಂದು ಬರೆಯಬೇಕು. ಕೀರ್ದಿಯನ್ನು ಬರೆದಂತೆಯೇ ಖಾತೆಯನ್ನಾದರೂ ಬರೆಯಬೇಕು. ಆದರೆ ಕೀರ್ದಿಯಲ್ಲಿ ಬರೆದಂತೆ ಖಾತೆಯಲ್ಲಿ ವ್ಯವಹಾರಗಳನ್ನು ವಿವರವಾಗಿ ಬರೆಯಬಾರದು. ೧ನೆಯ ಮನೆಯಲ್ಲಿ ರಕಮು ಪರಿಣಾಮಗಳನ್ನೂ ೨ನೆಯ

೩ನೆಯ ೪ನೆಯ ಮನೆಗಳಲ್ಲಿ ಕೀರ್ದಿಯಂತೆ ತಪಶೀಲನ್ನು ಬರೆಯುವ ಕೀರ್ದಿಯ ಪಾನು ಮಿತಿ( ತಾರೀಖು )ಗಳನ್ನು ಸಂಕ್ಷೇಪವಾಗಿ ಬರೆಯಬೇಕು. ಅದರ ಕೆಳಗೆ ಕೀರ್ದಿಯಲ್ಲಿ ಹೊಡೆದಂತೆ ——— ಹೀಗೆ ಜೋಡು ಗೆರೆಗಳನ್ನು ಹೊಡೆಯಬಾರದು. ಕೀರ್ದಿಯಲ್ಲಿ ಖಾತೆಯ ಪಾನನ್ನು ಹಾಕಿರಬೇಕು.

ಉದಾ:— (೧) ಮೋಟ ನಾಗಪ್ಪನು ೫೦೦ ರೂ. ಗಳನ್ನು ರೋಖು ಕೊಟ್ಟು ಧೋತರ ಜೋಡು ೫೦, ದರ ೧೦ ರೂ. ಪ್ರ. ಖರೀದಿ ಮಾಡಿದನು. ತಾ. ೧.೧.೪೫ ಇ.

ಇಲ್ಲಿ ಒಂದು ವ್ಯವಹಾರವಿರುವದು. ಅದರ ಪರಿಣಾಮ—೫೦೦ ರೂ ಖರ್ಚು, ರಕಮು—೫೦೦ ರೂ. ಖಾತೆ—ಜವಳಿಯದು; ತಪಶೀಲು—ಧೋತರ ಜೋಡು ೫೦, ದರ ೧೦ ರೂ. ಪ್ರ.

ಮೋಟ ನಾಗಪ್ಪನ

ಕೀರ್ದಿ

ತಾ. ೧—೧—೪೫ ಇ.

ಜಮೆ ——————— ರೂ. ಖರ್ಚು ——————— ರೂ.

೫೦೦ ಜವಳಿಯ ಖಾತೆ:—

ಧೋತರ ಜೋಡು ೫೦, ದರ ೧೦ ರೂ. ಪ್ರ. ಖರೀದಿ ಮಾಡಿದೆ.

ಖಾ. ಪಾ. ಪಾ. ನಂ.

ಖತಾವಣಿ

ಜವಳಿಯ ಖಾತೆ

ಜಮೆ ——————— ರೂ. ಖರ್ಚು ——————— ರೂ.

೫೦೦ ಕೀ. ಪಾ. ೧ ತಾ. ೧.೧.೪೫

ಉದಾ:— (೨) ಮೋಟ ನಾಗಪ್ಪನು ತಾ. ೨—೨—೪೫ ಇ. ದಿವಸ ಜೋಳ ಮಣ ೮೪, ದರ ೫ ರೂ. ಪ್ರ. ಕೊಂಡನು. ಮತ್ತು

ತಾ. ೪—೨—೪೫ ಇ. ದಿವಸ ಜೋಳ ಮಣ ೪೦. ದರ ೬ ರೂ. ೮ ಆ. ಪ್ರ.

ತಾ. ೬—೨—೪೫ ಇ. ,, ,, ,, ೨೦. ,, ೬ ರೂ. ಪ್ರ.

ತಾ. ೮—೨—೪೫ ಇ ,, ,, ,, ೧೬ ,, ೬ ರೂ. ೪ ಆ. ಮಾರಿದನು.

ಇಲ್ಲಿ ನಾಲ್ಕು ವ್ಯವಹಾರಗಳಿರುತ್ತವೆ. ಇವುಗಳನ್ನು ಮಿತಿವಾರ ಕೀರ್ದಿಯಲ್ಲಿ ಬರೆದು ಖಾತೆಗೆ ಏರಿಸಬೇಕು.

### ಕೀರ್ದಿ

ತಾ. ೨—೨—೧೯೪೫ ಇಸ್ವಿ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ಜೋಳದ ಖಾತೆ:— ಜೋಳ ಮಣ ೮೪, ದರ ೫ ರೂ. ಪ್ರಕಾರ ಕೊಂಡದ್ದು. ಖಾ. ಪಾ. ಪಾ. ನಂ. | ೪೨೦ |

ತಾ. ೪—೨—೪೫ ಇ. ಪಾ. ೨

| ಜಮೆ | ರೂ. | ಖರ್ಚು | ರೂ. |
|---|---|---|---|
| ಜೋಳದ ಖಾತೆ:— ಜೋಳ ಮಣ ೪೦, ದರ ೭ ರೂ. ೮ ಆ. ಪ್ರ. ಮಾರಿದೆ. ಖಾ. ಪಾ. ಪಾ. ನಂ. | ೩೦೦ | | |

ತಾ. ೬—೨—೪೫ ಇ. ಪಾ. ೨

| ಜಮೆ | ರೂ. | ಖರ್ಚು | ರೂ. |
|---|---|---|---|
| ಜೋಳದ ಖಾತೆ:— ಜೋಳ ಮಣ ೨೦, ದರ ೭ ರೂ. ಪ್ರ. ಮಾರಿದೆ. ಖಾ. ಪಾ. ಪಾ. ನಂ. | ೧೫೦ | | |

ತಾ. ೮—೨—೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ಜೋಳದ ಖಾತೆ:— ಜೋಳ ಮಣ ೧೨, ೮ ರೂ. ೪ ಆ. ಪ್ರ. ಮಾರಿದೆ. ಖಾ. ಪಾ. ಪಾ. ನಂ. | ೧೦೦ | | |

### ಖತಾವಣಿ

### ಜೋಳದ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ಕೀ. ಪಾ. ೨ ತಾ. ೪.೨.೪೫ | ೩೦೦ | ಕೀ. ಪಾ. ೧ ತಾ. ೨.೨.೪೫ ಇ. | ೪೨೦ |
| ಕೀ. ಪಾ. ೨ ತಾ. ೬.೨.೪೫ | ೧೫೦ | | |
| ಕೀ. ಪಾ. ೩ ತಾ. ೮.೨.೪೫ | ೧೦೦ | | |

ಈ ಖಾತೆಯಿಂದ ಜೋಳವನ್ನು ಖರೀದಿ ಮಾಡಿದ ರಕಮೂ ಇಂದಿನ ಜೋಳದ ಮಾರಾಟದಿಂದ ಬಂದ ರಕಮೂ ಒಂದೇ ಕಡೆಯಲ್ಲಿ ದೊರೆಯುತ್ತವೆ. ಆದದರಿಂದ ಜೋಳದ ವ್ಯಾಪಾರದಿಂದ ಆದ ಲಾಭಹಾನಿಗಳನ್ನೂ ತಿಳಿದು ಕೊಳ್ಳಲಿಕ್ಕೆ ಅನುಕೂಲವಾಗುವದು.

ಖಾತೆಗಳಲ್ಲಿ ಇಷ್ಟೇ ಸಂಗತಿಗಳನ್ನು ಬರೆಯುವದರಿಂದ ಕೊಂಡ ಮತ್ತು ಮಾರಿದ ಜಿನಸುಗಳು ಎಷ್ಟೆಷ್ಟು ಎಂಬುದು ತಿಳಿಯುವದಿಲ್ಲ. ಹೀಗೆ ತಿಳಿಯ ಬೇಕಾದರೆ ಕೆಳಗೆ ಹೇಳಿದಂತೆ ಖಾತೆಗಳನ್ನು ಬರೆಯಬೇಕು. ಪ್ರತಿಯೊಂದು ಭಾಗದ ೪ ಮನೆಗಳೊಳಗಿನ ಒಂದನೆಯ ಮನೆಯಲ್ಲಿ ಹಣವನ್ನೂ, ೨ನೆಯ ದರಲ್ಲಿ ಕೊಂಡ ಜೀನಸುಗಳ ಪರಿಣಾಮವನ್ನೂ, ೩ನೆಯ ೪ನೆಯ ಮನೆಗಳಲ್ಲಿ ಕೀರ್ದಿಯ ಪಾನು ಮಿತಿ (ತಾರೀಖು)ಗಳನ್ನೂ ಬರೆಯಬೇಕು.

ಉದಾ:— (೨) ಜೋಳದ ಖಾತೆ

೧೯೪೫

| ಜಮೆ | ರೂ. | ಖರ್ಚು | ರೂ. |
|---|---|---|---|
| ೩೦೦ ಮ. ೪೦ ಕೀ. ಪಾ. ೨ ತಾ. ೪.೨ | | ೪೨೦ ಮ. ೪೪ ಕೀ. ಪಾ. ೧ ತಾ. ೨.೨.೪೫ | |
| ೧೪೦ ಮ. ೨೦ ಕೀ. ಪಾ. ೨ ತಾ. ೬.೨ | | | |
| ೧೦೦ ಮ. ೧೬ ಕೀ. ಪಾ. ೩ ತಾ. ೮-೨ | | | |

ಉದಾ:— (೩) ಮೇಟಿ ನಾಗಪ್ಪನು ತಾ. ೫—೨—೪೫ ಇ. ದಿವಸ ೬೦೦ ರೂ. ಗಳ ಬಂಗಾರ ತೊಲೆ ೧೨ ದರ ೫೦ ರೂ. ಪ್ರ. ನಾರಾಯಣರಾವ ಕಾಣೆ, ಧಾರವಾಡ ಇವರಿಗೆ ಮಾರಿದನು. ಅವರು ೨೦೦ ರೂ. ಗಳನ್ನು ರೋಖು ಕೊಟ್ಟರು; ಮತ್ತು ತಾ. ೨೫.೨.೪೫ ಇ. ದಿವಸ ೨೦೦ ರೂ. ಗಳನ್ನೂ, ತಾ. ೫-೩-೪೫ ಇ. ದಿವಸ ೧೫೦ ರೂ. ಗಳನ್ನೂ ಕೊಟ್ಟರು.

ಮೇಟಿ ನಾಗಪ್ಪನ

ಕೀರ್ದಿ

ತಾ. ೫—೨—೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೬೦೦ ಬಂಗಾರದ ಖಾತೆ:— ತಪಶೀಲು— ಬಂಗಾರ ತೊಲೆ ೧೨, ದರ ೫೦ ರೂ. ಪ್ರ. ನಾರಾಯಣರಾವ ಕಾಣೆ ಇವರಿಗೆ ಮಾರಿದೆ ೨೦೦ ರೂ. | | ೪೦೦ ನಾರಾಯಣರಾವ ಕಾಣೆ ಇವರ ಖಾತೆ:— ತಪಶೀಲು— ೬೦೦ ರೂ ಬಂಗಾರ ತೊಲೆ ೧೨, ದರ ೫೦ ರೂ. ಪ್ರ. ಮಾರಿದೆ ೨೦೦ | |

ರೋಖು ಕೊಟ್ಟರು ಉಳಿದ ೪೦೦ ರೂ ಅವರ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

ರೂ. ರೋಖು ಕೊಟ್ಟರು ಉಳಿದ ೪೦೦ ರೂ. ಬಂಗಾರಖಾತೆಗೆ ಜಮೆ
ಖಾ ಪಾ. ಪಾ. ನಂ.

## ಕೀರ್ದಿ

ತಾ. ೨೫—೨—೪೫ ಇ.

ಜಮೆ—————ರೂ. ಖರ್ಚು—————ರೂ.

೨೦೦ ನಾರಾಯಣರಾವ ಕಾಣೆ
ಇವರ ಖಾತೆ:—
ರೋಖು ಜಮೆ.
ಖಾ. ಪಾ. ಪಾ. ನಂ.

ತಾ. ೫—೩—೪೫ ಇ.

ಜಮೆ—————ರೂ. ಖರ್ಚು—————ರೂ.

೧೫೦ ನಾರಾಯಣರಾವ ಕಾಣೆ
ಇವರ ಖಾತೆ:—
ರೋಖು ಜಮೆ.
ಖಾ. ಪಾ. ಪಾ. ನಂ.

ಇಲ್ಲಿ ಎರಡು ಖಾತೆಗಳನ್ನು ಬರೆಯಬೇಕಾಗುವದು:—(೧) ಬಂಗಾರದ್ದು. (೨) ಕಾಣೆ ಅವರದು.

## ಖತಾವಣಿ

### ಬಂಗಾರದ ಖಾತೆ

ಜಮೆ—————ರೂ. ಖರ್ಚು—————ರೂ.

೬೦೦ ತೊ. ೧೨ ಕೀ. ಪಾ. ೧
ತಾ. ೫.೨.೪೫

### ಖಾತೆ:— ನಾರಾಯಣರಾವ ಕಾಣೆ, ಧಾರವಾಡ

ಜಮೆ—————ರೂ. ಖರ್ಚು—————ರೂ.

೨೦೦ ಕೀ. ಪಾ. ತಾ. ೨೫-೨-೪೫ ಇ.
೧೫೦ ಕೀ. ಪಾ ತಾ. ೫-೩-೪೫ ಇ.

೪೦೦ ಕೀ. ಪಾ. ತಾ. ೫—೨—೪೫ ಇ.

ಉದಾ:—(೪) ತಾ ೨—೨—೪೫ ಇ. ದಿವಸ ೫೦ ರೂ. ಮನೆಯ ಬಾಡಿಗೆ ಕೊಟ್ಟಿದೆ. ತಾ. ೩-೨-೪೫ ಇ. ದಿವಸ ಕಟ್ಟಿಗೆ ಚಕ್ಕಡಿ ೨, ದರ ೧೫ ರೂ. ಪ್ರ. ಮನೆಗೆ

ಕೊಂಡೆವು. ತಾ. ೭-೨-೪೫ ಇ. ದಿವಸ ರುಮಾಲ ೨, ದರ ೨೫ ರೂ. ಪ್ರ. ಕೋಟಿನ ಅರಿವೆ ವಾರ ( ಯಾರ್ಡ ) ೪, ದರ ೧೨ ರೂ. ಪ್ರ. ಕೊಂಡೆವು.

### ಕೀರ್ದಿ

ತಾ. ೨—೨—೧೯೪೫ ಇಸ್ವಿ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೫೦ ಮನೆಯ ಬಾಡಿಗೆ ಖಾತೆ:—<br>ಜನವರಿ ತಿಂಗಳ ಬಾಡಿಗೆ ಕೊಟ್ಟಿದೆ.<br>ಖಾ. ಪಾ. ಪಾ. ನಂ. | |

ತಾ. ೩—೨—೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೩೦ ಉರವಲ ಖಾತೆ:—<br>ಮನೆಗೆ ಕಟ್ಟಿಗೆ ಚಕ್ಕಡಿ ೨, ದರ ೧೫ ರೂ. ಪ್ರ. ಕೊಂಡಿದೆ.<br>ಖಾ. ಪಾ. ಪಾ. ನಂ. | |

ತಾ. ೭—೨—೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೯೮ ಜವಳಿಯ ಖಾತೆ:—<br>೫೦ ರೂ. ರುಮಾಲ ೨, ದರ ೨೫ ರೂ. ಪ್ರ.<br>೪೮ ರೂ. ಕೋಟಿನ ಅರಿವೆ ವಾರ ೪, ದರ ೧೨ ರೂ. ಪ್ರ.<br>೯೮ ರೂ. ಮನೆಯ ಸಲುವಾಗಿ ಕೊಂಡಿದೆ.<br>ಖಾ. ಪಾ. ಪಾ. ನಂ. | |

ಮನೆಯ ಬಾಡಿಗೆ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೫೦ ಶೀ. ಪಾ. ತಾ. ೨—೨—೪೫ | |

ಉರುವಲ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೩೦ ಶೀ. ಪಾ. ತಾ. ೩—೨—೪೫ | |

ಜವಳಿಯ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೯೮ ಶೀ. ಪಾ. ತಾ. ೬—೨—೪೫ | |

**೫. ಖತಾವಣಿಯ ಉಪಯೋಗ:—** (೧) ವ್ಯಾಪಾರಿಗೆ ಪ್ರತಿಯೊಂದು ಗಿರಾಕಿಯ ಕೊಡುಕೊಳ್ಳುವದು ತಿಳಿಯುವದಲ್ಲದೆ ಹೆಚ್ಚಿಗೆ ಉದ್ರಿ ಕೊಡಬೇಕೋ ಕೊಡಬಾರದೋ ಎಂಬದೂ, (೨) ಕೊಂಡ, ಮಾರಿದ, ಉಳಿವ ಜಿನಸುಗಳು ಎಷ್ಟೆಷ್ಟೆಂಬುದೂ, (೩) ಜಿನಸಿನ ಮಾರಾಟದಿಂದ ಆದ ಲಾಭ ಹಾನಿಗಳೂ, (೪) ಪ್ರತಿಯೊಂದು ಬಾಬಿನಿಂದಾದ ಆದಾಯ ವ್ಯಯಗಳೂ, (೫) ಸ್ವಲ್ಪ ಸ್ಥಳದಲ್ಲಿಯೇ ತನಗೆ ಬೇಕಾಗುವ ಎಲ್ಲ ಮಾಹಿತಿಯೂ ಗೊತ್ತಾಗುತ್ತವೆ.

**೬. ಪಠಾಣವಹಿಯ ಬರೆಹದ ಕ್ರಮ:—** ಪಠಾಣವಹಿಯ ಖಾತೆಗಳಲ್ಲಿ ಪ್ರತಿಯೊಂದು ವ್ಯವಹಾರವನ್ನು ಕೀರ್ದಿಯಲ್ಲಿ ಬರೆದಂತೆಯೇ ಬರೆಯುತ್ತಾರೆ. ಅಂದರೆ ತಪಶೀಲವಾರ ಜಮಾಖರ್ಚನ್ನೇ ಬರೆಯುವರು. ಇದರಲ್ಲಿ ಕೀರ್ದಿಯ ನಕಲು ಖಾತೇವಾರ ವಿಲೇವಾರ ಮಾಡಿರುತ್ತದೆ. ಆದರೆ ಖತಾವಣಿಯಲ್ಲಿ ಕೀರ್ದಿಯ ಗೋಷವಾರೆಯನ್ನು ಮಾತ್ರ ಖಾತೇವಾರ ವಿಲೇವಾರಿ ಮಾಡಿರುತ್ತಾರೆ, ಖತಾವಣಿಯಲ್ಲಿ ಯಾವದೊಂದು ವ್ಯವಹಾರದ ತಪಶೀಲು ಗೊತ್ತಾಗಬೇಕಾದರೆ ಕೀರ್ದಿಯನ್ನು ನೋಡಬೇಕಾಗುವದು. ಆದರೆ ಪಠಾಣವಹಿಯಲ್ಲಿ ಖಾತೆಯಲ್ಲಿಯೇ ತಪಶೀಲು ದೊರೆಯುವದರಿಂದ ಕೀರ್ದಿಯನ್ನು ನೋಡುವ ಕಾರಣ ಬೀಳುವದಿಲ್ಲ. ಖತಾವಣಿಯಂತೆ ಇದರಲ್ಲಿಯೂ ಪ್ರತಿದಿವಸದ ಶಿಲಕು ತೆಗೆಯುವದಿಲ್ಲ.

(೧) ಪ್ರತಿದಿವಸ ಶಿಲಕು ತೆಗೆಯುವ ಅವಶ್ಯವಿಲ್ಲದ ಸ್ವಲ್ಪ ವ್ಯವಹಾರ ವುಳ್ಳವರೂ, (೨) ಕೀರ್ದಿಯು ಕಳೆದರೂ ವ್ಯವಹಾರಗಳ ತಪಶೀಲು ಸಿಗ-ಬೇಕೆನ್ನುವವರೂ, (೩) ಗಿರಾಕಿಗಳಿಂದ ತಮಗೆ ಬರಬೇಕಾದ ರಕಮಿನ ತಪಶೀಲು ಸಹಿತವಾಗಿ ಆಗಾಗ ತಿಳಿಸಬೇಕಾಗುವವರೂ, (೪) ಮೇಲಿಂದ ಮೇಲೆ ಖಾತೆಗಳ ತಪಶೀಲನ್ನು ನೋಡುವದು ಅವಶ್ಯವಿದ್ದ ದೊಡ್ಡ ವ್ಯಾಪಾರಸ್ಥರೂ ಪತಾಣವಹಿಯನ್ನೇ ಇಡುವರು.

ಕೀರ್ದಿ

ತಾ. ೨೪—೨—೧೯೪೫ ಇ.

| ಜಮೆ ರೂ. | ಖರ್ಚು ರೂ. |
|---|---|
| | ೩೭೫ ಬಂಗಾರದ ಖಾತೆ :— ಬಂಗಾರ ತೊಲೆ ೭॥ ದರ ೫೦ ರೂ. ಪ್ರ. ಕೊಂಡಿತು. ಖಾ. ಪಾ. ಪಾ ನಂ. |

ಪತಾಣ ವಹಿ.

ಬಂಗಾರದ ಖಾತೆ.

| ಜಮೆ ರೂ. | ಖರ್ಚು ರೂ. |
|---|---|
| | ೩೭೫ ಬಂಗಾರ ತೊಲೆ ೭॥, ದರ ೫೦ ರೂ. ಪ್ರ. ಕೊಂಡದ್ದು; ಕೀ. ಪಾ. ೧ ತಾ. ೨೪-೨-೪೫ ಇ. |

೫. ಪ್ರಶ್ನೆಗಳು :—

೧ ಖಾತೆಯನ್ನಿಡುವ ಉದ್ದೇಶವೇನು ? ಖಾತೆಗಳಲ್ಲಿ ಎಷ್ಟು ಪ್ರಕಾರಗಳು ? ಯಾವವು ?

೨ ಖತಾವಣಿ, ಪತಾಣವಹಿಗಳೆಂದರೇನು ? ಪ್ರತಿಯೊಂದರಲ್ಲಿ ಒಂದೊಂದು ವ್ಯವಹಾರವನ್ನು ಬರೆದು ತೋರಿಸಿರಿ.

೩ ಖತಾವಣಿಯ ಉಪಯೋಗವೇನು ?

೪ ಕೆಳಗಿನ ಖಾತೆಗಳಲ್ಲಿ ಇಸಮುವಾರ, ಜೀನಸುವಾರ, ಚಾಲುವಾರ ಭಾಗ ಮಾಡಿರಿ. ದೇಶೀ ಕಂಪನಿಯ ಖಾತೆ, ಖುದ್ದ ಖಾತೆ, ಪೋಸ್ಟ ಖರ್ಚು ಖಾತೆ,

ಜವಳಿಯ ಖಾತೆ, ಇಮಾರತ ಖಾತೆ, ಆಸ್ತಿಯ ಖಾತೆ, ಧರ್ಮಾದಾವ ಖಾತೆ, ಸಂಗಪ್ಪ ನಾಗನೂರ ಇವರ ಖಾತೆ, ಚಿಮಣೀ ಎಣ್ಣೆಯ ಖಾತೆ, ಚಿಲ್ಲರ ಖರ್ಚು ಖಾತೆ, ಸಾದಿಲವಾರ ಖಾತೆ.

೫ ಕೀರ್ದಿ ಮತ್ತು ಖತಾವಣಿಗಳಲ್ಲಿ ಮಹತ್ವವಾದದ್ದು ಯಾವದು? ಯಾಕೆ?

೬ ಎರಡನೆಯ ಪ್ರಕರಣದ ೭-೧೩ ಈ ಪ್ರಶ್ನೆಗಳ ಖಾತೆಗಳನ್ನು ಬರೆಯಿರಿ.

೭ ಕೆಳಗಿನ ವ್ಯವಹಾರಗಳನ್ನು ಯಾವ ಖಾತೆಗಳಲ್ಲಿ ಯಾವ ಯಾವ ಕಡೆಗೆ ಬರೆಯುವಿರಿ? ಯಾಕೆ? ೫೦೦ ರೂ. ಗಳಿಗೆ ಹೊಲವನ್ನು ಲಾವಣಿಗೆ ಕೊಟ್ಟೆವು. ತೋಟಕ್ಕೆ ೫ ರೂ. ಬೀಜವನ್ನು ಕೊಂಡೆವು, ೪೦೦ ರೂ ಗಳಿಗೆ ಒಂದು ಮನೆ ಕೊಂಡುಕೊಂಡೆವು.

೮ ಕೆಳಗಿನ ವ್ಯವಹಾರಗಳನ್ನು ಗಡಗ ಬಸಪ್ಪನ ಕೀರ್ದಿ ಖತಾವಣಿಗಳಲ್ಲಿ ಬರೆಯಿರಿ

ಶಕೆ ೧೮೬೪ನೆಯ ಚೈತ್ರ ಶುದ್ಧ ೧:—೬೦೦ ರೂ. ಗಳನ್ನು ಹಾಕಿ ವ್ಯಾಪಾರ ಪ್ರಾರಂಭಿಸಿದನು. ೫ ರೂ. ಮಸಿ ಟಾಕು ಕಾಗದ ಪುಸ್ತಕಗಳನ್ನು ಕೊಂಡನು

ಚೈತ್ರ ಶುದ್ಧ ೨:—೨೦೦ ರೂ. ಜೋಳ ಮಣ ೮೦, ದರ ೨॥ ರೂ. ಪ್ರಕಾರ ಕೊಂಡು ೨೦ ಮಣ ಜೋಳ ೩ ರೂ. ಪ್ರ. ಮಾರಿದನು. ೬೦ ರೂ. ಕಪಾಟು ೩, ದರ ೨೦ ರೂ. ಪ್ರ. ಕೊಂಡನು. ಜೋಳ ಮಣ ೧೬, ದರ ೪ ರೂ. ೧೨ ಆ. ಪ್ರ, ಕಳ್ಳೀ ಸಂಗಪ್ಪನಿಗೆ ಉದ್ರಿ ಮಾರಿದನು. ಜೋಳ ಮಣ ೨೮, ದರ ೫ ರೂ. ಪ್ರ. ಪಿಂಜಾರ ಖಾದಿರಸಾಬನಿಗೆ ಉದ್ರೀ ಮಾರಿದನು. ಜಮಖಾನೆ ೨, ದರ ೬ ರೂ. ಪ್ರ. ಅಂಗಡಿಯ ಉಪಯೋಗಕ್ಕೆ ಕೊಂಡನು.

ಚೈತ್ರ ಶುದ್ಧ ೪:—೬೦ ರೂ. ಕಳ್ಳೀ ಸಂಗಪ್ಪನಿಂದ ಬಂದವು. ೭೫ ರೂ. ಪಿಂಜಾರ ಖಾದಿರಸಾಬನಿಂದ ಬಂದವು. ಜೋಳ ಮಣ ೫೬, ದರ ೩ ರೂ. ೧೨ ಆ. ಪ್ರ. ಕಾಳೀ ರಾಮಪ್ಪನಲ್ಲಿ ಉದ್ರಿ ತಂದನು. ಜೋಳ ಮಣ ೪೦ ದರ ೩ ರೂ. ೧೨ ಆಣೆ. ಪ್ರ. ಹೂಲೀ ರಾಮಪ್ಪನಲ್ಲಿ ಉದ್ರಿ ತಂದನು. ಜೋಳ ಮಣ ೪೦ ದರ ೩ ರೂ. ೧೨ ಆ. ಪ್ರ. ಗುಬ್ಬೀ ಫಕೀರಪ್ಪನಿಗೆ ಉದ್ರಿ ಮಾರಿದನು.

ಚೈತ್ರ ಶುದ್ಧ ೬:—೧೧೦ ರೂ. ಗುಬ್ಬೀ ಫಕೀರಪ್ಪನಿಂದ ಬಂದವು. ೨೦ ರೂ. ಆಳಿನ ಮಜೂರಿಯನ್ನು ಕೊಟ್ಟನು.

ಚೈತ್ರ ಶುದ್ಧ ೯:—೨೦ ರೂ. ಮನೆಯ ಖರ್ಚಿನ ಸಲುವಾಗಿ ಕೊಟ್ಟನು. ಜೋಳ ಮಣ ೨೪ ದರ ೨ ರೂ. ೮ ಆ. ಪ್ರ. ಕೊಪ್ಪಳ ಮಂಗೆಪ್ಪನಲ್ಲಿ ಉದ್ರಿ ತಂದನು ಖಾಬಸಪ್ಪನಿಂದ ಹೊಲದ ಲಾವಣಿಯ ೫೦೦ ರೂ. ಬಂದವು. ೨೫ ರೂ ಪಿಂಜಾರ ಖಾದಿರಸಾಬನಿಂದ ಬಂದವು.

ಚೈತ್ರ ಶುದ್ಧ ೧೫:—೧೫ ರೂ. ಮ್ಯುನಸಿಪಾಲಿಟಿಯ ಕಸಪಟ್ಟಿಯನ್ನು ಕೊಟ್ಟನು. ೧೧೦ ರೂ. ಗಳನ್ನು ಧಾರವಾಡದ ರಾಮಣ್ಣನಿಗೆ ಕೊಟ್ಟನು. ೧೨ ರೂ ಅಂಗಡಿಯ ಬಾಡಿಗೆ ಕೊಟ್ಟಿತು.

---

# ನಾಲ್ಕನೆಯ ಪ್ರಕರಣ

## ತೋಂಡಮಿಳವಣಿ ಅಥವಾ ಬಾಯಿಗೂಡಿಸುವದು

೧. ತೋಂಡಮಿಳವಣಿಯ ಉದ್ದೇಶ. ೨. ತೋಂಡಮಿಳವಣಿ ಅಂದರೇನು? ೩. ಬಾಕಿಗಳು:— (ಅ) ಕಚ್ಚಾಬಾಕಿ (ಬ) ಪಕ್ಕಾಬಾಕಿ. ೪. ಲಾಭಹಾನಿಯ ಖಾತೆ. ೫. ಅಥಾವೆ ೬. ತೋಂಡಮಿಳವಣಿಯ ಕ್ರಮ:— (ಅ) ಇಸಮಿನ ಖಾತೆ, (ಬ) ಬಾಬಿನ ಖಾತೆ, (ಕ) ಜೀನಸಿನ ಖಾತೆ. ೭. ಖರೀದಿ ವಿಕ್ರೀ-ಖಾತೆ. ೮. ಅಖ್ಯೆರ ಅಥಾವೆಯ ತೋಂಡಮಿಳವಣಿ. ೯. ಪ್ರಶ್ನಗಳು

೧. **ಬಾಯಿಗೂಡಿಸುವದರ ಉದ್ದೇಶ:**— ಇದರ ಉದ್ದೇಶಗಳು ಎರಡು. (ಅ) ನಿಯಮಿತ ಅವಧಿಯಲ್ಲಿ ಯಾವ ಬಾಬಿನಿಂದ ಎಷ್ಟು ಲಾಭವಾಯಿತು, ಯಾವ ಬಾಬಿನಿಂದ ಎಷ್ಟು ಹಾನಿಯಾಯಿತು ಎಂಬುದನ್ನು ತಿಳಿದುಕೊಳ್ಳುವದು; ಲಾಭಹಾನಿಖಾತೆ ತಯಾರಿಸುವದು.

(ಬ) ಅದೇ ಅವಧಿಯ ಕೊನೆಗೆ ಕೊಡಕೊಳ್ಳುವದು, ಲಾಭವು ಇಲ್ಲವೆ ಹಾನಿಯು ಎಷ್ಟೆಂಬುದನ್ನು ತಿಳಿದುಕೊಳ್ಳುವದು; ಅಥಾವೆ ತೆಗೆಯುವದು.

೨. **ತೋಂಡಮಿಳವಣಿ ಅಂದರೇನು?**:— ಪ್ರತಿಯೊಂದು ಖಾತೆಯ ಬಾಕಿಯು (ಉಳಿದಿದ್ದರೆ ಗೊತ್ತಾಗಬೇಕೆಂದು ಎರಡೂ ಬದಿಗಳನ್ನು ಸರಿಮಾಡುವದಕ್ಕೆ ತೋಂಡಮಿಳವಣಿ ಅಥವಾ ಬಾಯಿಗೂಡಿಸೋಣ ಎನ್ನುವರು. ಇದರಿಂದ ಒಂದು ಖಾತೆಯ ಬಾಕಿಯನ್ನು ವಿರುದ್ಧ ಸಂಣಾಮದಿಂದ ಮತ್ತೊಂದು ಖಾತೆಗೆ ಏರಿಸಲಿಕ್ಕೆ ಬರುವದು ಯಾಕಂದರೆ ಖಾತೆಯನ್ನು ಬಾಯಿಗೂಡಿಸುವದಕ್ಕೆ (ಮುಗಿಸುವದಕ್ಕೆ) ಮಾಡುವ ಜಮಾಖರ್ಚಿನಿಂದ ರೋಖು ಶಿಲಕಿನಲ್ಲಿ ಹೆಚ್ಚು ಕಡಿಮೆಯಾಗುವದಿಲ್ಲ ಅದರಿಂದ ಆ ಖಾತೆಯ ರಕಮು ಪರಭಾರೆ ಇರುತ್ತದೆ. ಈ ರಕಮನ್ನು ಎರಡು ಭಿನ್ನ ಖಾತೆಗಳಿಗೆ ವಿರುದ್ಧ ಸಂಣಾಮದಿಂದ ಏರಿಸಬೇಕು.

೩. ಬಾಕಿಗಳು:— ಬಾಕಿಗಳಲ್ಲಿ ಎರಡು ಪ್ರಕಾರಗಳು:— (ಅ) ಕಚ್ಚಾಬಾಕಿ (ಬ) ಪಕ್ಕಾಬಾಕಿ.

(ಅ) ಕಚ್ಚಾಬಾಕಿ:— ಯಾವದೊಂದು ಖಾತೆಯ ಬಾಕಿಯು ಎಂದೂ ತಿರುಗಿ ಬಾರದಂಥದು ಅಥವಾ ಕೊಡದಂಥದು ಇದ್ದರೆ ಅದಕ್ಕೆ ಕಚ್ಚಾಬಾಕಿಯೆನ್ನುವರು.

ಉದಾ:— ೧೫ ರೂ. ಕಿರಕೋಳ ಖರ್ಚು ಖಾತೆಯ ಬಾಕಿಯು. ೩೦ ರೂ. ಕಮೀಶನ್ನಿನ ಖಾತೆಯ ಬಾಕಿಯು, ಎಲ್ಲ ಬಾಬಿನ ಖಾತೆಗಳ ಬಾಕಿಗಳು.

(ಬ) ಯಾವದೊಂದು ಖಾತೆಯ ಬಾಕಿಯು ಕೈಯಲ್ಲಿ ಇದ್ದರೆ, ಅಥವಾ ಎಂದಾದರೂ ಬರುವಂತೆ ಇಲ್ಲವೆ ಕೊಡುವಂತೆ ಇದ್ದರೆ ಅದಕ್ಕೆ ಪಕ್ಕಾಬಾಕಿಯೆನ್ನುವರು.

ಉದಾ:— ರೋಖು, ಎಲ್ಲ ಇಸಮಿನ ಖಾತೆಗಳ ಬಾಕಿಗಳು, ಮತ್ತು ಜೀನಸುಗಳ ಖಾತೆಗಳ ಶಿಲಕು ಮಾಲಿನ ಬೆಲೆ ಮುಂತಾದವುಗಳು.

ಜೀನಸುಗಳ ಖಾತೆಗಳಲ್ಲಿ ಶಿಲಕು ಮಾಲು ಇರದಿದ್ದರೆ ಇಲ್ಲವೆ ಇಸಮಿನ ಖಾತೆಗಳ ಬಾಕಿಗಳು ಬಾರದಂತೆ ಇದ್ದರೆ ಅಂದರೆ ಮುಳುಗಿ ಹೋದರೆ ಆ ಬಾಕಿಗಳು ಕಚ್ಚಾಬಾಕಿಗಳಾಗುವವು.

೪. ಲಾಭಹಾನಿಯ ಖಾತೆ ಅಥವಾ ಉತ್ಪನ್ನ ಖರ್ಚಿನ ಖಾತೆ:— ಕಚ್ಚಾಬಾಕಿಯನ್ನು ಬರೆದಿರುವ ಹೊಸ ಖಾತೆಗೆ ವ್ಯಾಪಾರಿಗಳು ಲಾಭ-ಹಾನಿಯ ಖಾತೆ, ಉಳಿದವರು ಉತ್ಪನ್ನ ಖರ್ಚು ಖಾತೆ ಅನ್ನುವರು. ಆದರೆ ಕೆಲವು ಕಚ್ಚಾಬಾಕಿಗಳು ಶುದ್ಧ ಖಾತೆಗೆ ಏರುತ್ತವೆ; ಉದಾಹರಣಾರ್ಥ:— ಮನೆಯ ಖರ್ಚಿನ ಖಾತೆಯ ಬಾಕಿ, ಕಮತದ ಖಾತೆಯ ಬಾಕಿ.

ಲಾಭಹಾನಿಯ ಖಾತೆಯನ್ನು ಬರೆಯುವ ಪದ್ಧತಿಯು:— ಲಾಭಹಾನಿಯ ಖಾತೆಯನ್ನು ವರ್ಷಾಂತ್ಯಕ್ಕೆ ಇಲ್ಲವೆ ಯಾವದೊಂದು ಅವಧಿಯ ಕೊನೆಯ ದಿವಸ ಬರೆಯುತ್ತಾರೆ. ಈ ಖಾತೆಯ ಹೆಸರನ್ನು ಮಧ್ಯದಲ್ಲಿ ಬರೆದು ಅದರ ಕೆಳಗೆ ಈ ಮಿತಿಯಿಂದ(ತಾರೀಖಿನಿಂದ) ಈ ಮಿತಿಯ (ತಾರೀಖಿನ) ವರೆಗೆ ಎಂದು ಬರೆಯಬೇಕು. ಯಾಕಂದರೆ, ಲಾಭಹಾನಿಯ

ಖಾತೆಯು ವ್ಯಾಪಾರ ಮಾಡಿದ ಒಂದು ಅವಧಿಯ ಆರಂಭದಿಂದ ಅಂತ್ಯದ ವರೆಗೆ ಆದ ಲಾಭಗಳನ್ನೂ, ಹಾನಿಗಳನ್ನೂ ತೋರಿಸುತ್ತದೆ. ಮುಂದೆ ಉಳಿದ ಖಾತೆಗಳಂತೆ ಇದರ ರಕಮುಗಳನ್ನು ಬರೆಯಬೇಕು; ಆದರೆ ಉಳಿದ ಖಾತೆಗಳಲ್ಲಿ ಬರೆದಂತೆ ಬರೇ ಕೀರ್ದಿಯ ಪಾನು ಮಿತಿಗಳನ್ನು ಬರೆದರೆ ಲಾಭವು ಅಥವಾ ಹಾನಿಯು ಯಾವ ಬಾಬಿನಿಂದಾಯಿತು ಎಂಬುದು ನೋಡಿದ ಕೂಡಲೆ ಗೊತ್ತಾಗುವದಿಲ್ಲ. ಆದುದರಿಂದ ಕೀರ್ದಿಯ ಪಾನು, ಮಿತಿಗಳನ್ನು ಬರೆಯುವ ರಕಮನ್ನೂ, ಖಾತೆಯ ಹೆಸರನ್ನೂ ಮಾತ್ರ ಬರೆಯಬೇಕು.

ಒಂದು ಖಾತೆಯ ಬಾಕಿಯು ಕಚ್ಚಾ ಇದ್ದರೆ ಅದರ ರಕಮನ್ನು ಆದೇ ಖಾತೆಗೂ, ಲಾಭಹಾನಿಯ ಇಲ್ಲವೆ ಯೋಗ್ಯ ಖಾತೆಗೂ ವಿರುದ್ಧ ಪರಿಣಾಮದಿಂದ ಏರಿಸಬೇಕು. ಹೀಗೆ ಏರತಕ್ಕ ಎಲ್ಲ ಕಚ್ಚಾಬಾಕಿಗಳನ್ನು ಲಾಭ ಹಾನಿಯ ಖಾತೆಗಳಲ್ಲಿ ಬರೆದ ಮೇಲೆ ಆ ಖಾತೆಯ ಬಾಕಿಯು ನಿವ್ವಳ (ಪಕ್ಕಾ) ಲಾಭವನ್ನು ಇಲ್ಲವೆ ಹಾನಿಯನ್ನು ತೋರಿಸುತ್ತದೆ. ಈ ನಿವ್ವಳ (ಪಕ್ಕಾ) ಲಾಭ ಹಾನಿಗಳು ಪಕ್ಕಾ ಬಾಕಿಗಳಾಗುವದರಿಂದ ಇವನ್ನು ಕೆಲವರು ಅಢಾವೆಗೂ ಕೆಲವರು ಖುದ್ದ ಖಾತೆಗೂ ಒಯ್ಯುವರು. ಎರಡೂ ರೀತಿಗಳು ಸರಿಯಾಗಿದ್ದರೂ ಇದನ್ನು ಅಢಾವೆಗೂ ಎತ್ತುವದು ವಿಹಿತವು. ಯಾಕಂದರೆ ಯಜಮಾನನು ಒಬ್ಬನೇ ಇದ್ದರೆ ಖುದ್ದ ಖಾತೆಗೆ ಎತ್ತಿದರೆ ತಪ್ಪಾಗುವದಿಲ್ಲ. ಹಲವು ಜನರು ಯಜಮಾನರಿದ್ದರೆ ಖುದ್ದ ಖಾತೆ ಎಂದು ಬರೆಯಲಿಕ್ಕೆ ಬರುವದಿಲ್ಲ. ಆದುದರಿಂದ ಮೊದಲು ಅಢಾವೆಗೇ ಎತ್ತಬೇಕು.

ಉದಾ:—

ಲಾಭಹಾನಿಯ ಖಾತೆ

ತಾ. ೧ನೆಯ ಜೂನ ೧೯೪೫ ಇ. ಯಿಂದ ತಾ. ೩೧ನೆಯ ಮೇ ೧೯೪೫ ಇ. ಪೂರ್ಣ

| ಜಮೆ | ರೂ. | ಖರ್ಚು | ರೂ. |
|---|---|---|---|
| ೨೦೦ ಮಾಲಿನ ಮೇಲೆ ಲಾಭ | | ೨೫ ಪಗಾರ | |

ಉತ್ಪನ್ನ-ಖರ್ಚು ಖಾತೆಗಳನ್ನಾದರೂ ಲಾಭಹಾನಿ ಖಾತೆಯಂತೆಯೇ ಬರೆಯಬೇಕು.

೫. ಅಢಾವೆ:—ಪಕ್ಕಾಬಾಕಿಗಳನ್ನು ಬರೆದಿಡುವ ಖಾತೆಗೆ ಅಢಾವೆ ಅಥವಾ ಕೊಡಕೊಳ್ಳುವ ಖಾತೆ ಅನ್ನುವರು. ಇದನ್ನು ಬರೆಯುವದು

ಹೇಗೆಂದರೆ—ಮೊದಲು ಈ ಖಾತೆಯು ಹೆಸರನ್ನು ಬರೆದು ಅದರ ಕೆಳಗೆ ಕೊನೆಯ ದಿವಸದ ಮಿತಿಯು (ತಾರೀಖು) ನ್ನು ಮಾತ್ರ ಹಾಕಬೇಕು. ಯಾಕಂದರೆ, ಅಥಾವೆಯು ವ್ಯಾಪಾರದ ಅವಧಿಯು ಕೊನೆಯ ದಿವಸದ ಕೊಡಕೊಳ್ಳುವದನ್ನು ತೋರಿಸುವದು; ಮತ್ತು ಅದರ ಮರುದಿವಸವೇ ಕೆಲವರು ತಮ್ಮ ಬಾಕಿಯನ್ನು ತೀರಿಸುವದರಿಂದಲೂ, ಕೆಲವರು ಜೀನಸು ಗಳ ಖರೀದಿ ಇಲ್ಲವೆ ವಿಕ್ರಿ ಮಾಡುವದರಿಂದಲೂ, ಅಥಾವೆಯಲ್ಲಿ ಹೆಚ್ಚು ಕಡಿಮೆಯಾಗುವದುಂಟು. ಈ ಖಾತೆಯನ್ನಾದರೂ ಲಾಭಹಾನಿಯು ಖಾತೆಯಂತೆ ಮುಂದೆ ಬರೆಯಬೇಕು.

ಖಾತೆಯು ಬಾಕಿಯು ಪಕ್ಕಾ ಇದ್ದರೆ, ಆ ರಕಮನ್ನು ಆ ಖಾತೆಗೂ ಅಥಾವೆಗೂ ಇಲ್ಲವೆ ಯೋಗ್ಯ ಖಾತೆಗೂ ವಿರುದ್ಧ ಪರಿಣಾಮದಿಂದ ಏರಿಸಬೇಕು. ಮತ್ತು ಕಡೆಯ ದಿವಸದ ರೋಖು ಶಿಲಕು ಹಿಂದೆ ಹೇಳಿದಂತೆ ಪಕ್ಕಾ ಬಾಕಿಯು ಇರುತ್ತದೆ ಆದುದರಿಂದ ಈ ಶಿಲಕನ್ನು ಕೀರ್ದಿಯಲ್ಲಿ ಖರ್ಚು ಬರೆದ ಕೂಡಲೆ ಅಥಾವೆಯಲ್ಲಿಯೂ ಖರ್ಚಿನ ಕಡೆಗೆ ಬರೆಯಬೇಕು. ಇದರಂತೆ ಏರತಕ್ಕ ಎಲ್ಲ ಪಕ್ಕಾ ಬಾಕಿಗಳನ್ನು ಅಥಾವೆಗೆ ಒಯ್ದ ಮೇಲೆ, ಲಾಭಹಾನಿಯು ಖಾತೆಯು ಬಾಕಿ ಅಥಾವೆಯು ಬಾಕಿಗೆ ಸರಿ ಇದ್ದರೆ ಅದನ್ನು ಅಥಾವೆಗೆ ಎತ್ತಬೇಕು. ಯಾಕಂದರೆ, ವ್ಯಾಪಾರದ ಸ್ವಂತ ಹಣವೇನೂ ಇರುವದಿಲ್ಲ. ಅದರಲ್ಲಿ ಹಾಕಿದ ಹಣವು ಯಜಮಾನನಿಗಾಗಲಿ ಉಳಿದವರಿಗಾಗಲಿ ಕೊಡತಕ್ಕದ್ದಿರುತ್ತದೆ.

ಆದುದರಿಂದ ಕೈಯಲ್ಲಿದ್ದ ರೋಖು, ಮತ್ತು ಮಾಲು, ಮಂದಿಗೆ ಕೊಟ್ಟ ರಕಮು ಮತ್ತು ಆಸ್ತಿಗಳ ಬೆಲೆಯು ರಕಮು ಇವುಗಳ ಬೇರೀಜು, ಯಜಮಾನನ ಕಡೆಯಿಂದ ಇಲ್ಲವೆ ಬೇರೆಯವರ ಕಡೆಯಿಂದ ತಕ್ಕೊಂಡ ರಕಮು, ಮತ್ತು ನಿವ್ವಳ ಲಾಭ ಇವುಗಳ ಬೇರೀಜಗೆ ಸರಿ ಇರುತ್ತದೆ ಇದನ್ನು ಸಿದ್ಧಮಾಡುವದೇ ಅಥಾವೆಯ ಮುಖ್ಯ ಉದ್ದೇಶವು.

೭. **ತೋಂಡಮಿಳವಣಿಯ ಕ್ರಮ:**— (ಅ) ಇಸಮಿನ ಖಾತೆ, (ಬ) ಬಾಬಿನ ಖಾತೆ, (ಕ) ಜೀನಸಿನ ಖಾತೆ—ಇವುಗಳ ತೋಂಡಮಿಳವಣಿಯನ್ನು ಹೇಗೆ ಮಾಡಬೇಕೆಂಬದನ್ನೂ, ಲಾಭ-ಹಾನಿ-ಅಥಾವೆಗಳನ್ನು ಹೇಗೆ ತೆಗೆಯಬೇಕೆಂಬದನ್ನೂ ಇಲ್ಲಿ ವಿವರಿಸಿದೆ.

### (ಅ) ಇಸಮಿನ ಖಾತೆಯು ತೋಂಡಮಿಳವಣಿಯು ಕ್ರಮಃ—

ಖಾತೆಯು ಎರಡೂ ಬದಿಗಳ ಬೇರೀಜು ಸರಿಯಿದ್ದರೆ ಆ ಖಾತೆಯು ಬಾಯಿಗೂಡಿದಂತಾಯಿತು ಜಮೆಯು ಕಡೆಯು ರಕಮುಗಳನ್ನೂ ಖರ್ಚಿನ ಕಡೆಯು ರಕಮುಗಳನ್ನೂ ಬೇರೆ ಬೇರೆ ಬೇರೀಜು ಮಾಡಿ ಹೆಚ್ಚಾದ ರಕಮಿ-ನಲ್ಲಿ ಕಡಿಮೆಯಾದ ರಕಮನ್ನು ವಜಾ ಮಾಡಿದರೆ ಉಳಿದದ್ದೇ ಆ ಖಾತೆಯು ಬಾಕಿಯು ಎಂದು ತಿಳಿಯಬೇಕು. ಈ ಬಾಕಿಯನ್ನು ಕಡಿಮೆಯಾದ ರಕ-ಮಿನ ಕಡೆಗೆ ಬರೆದರೆ ಆ ಖಾತೆಯು ಎರಡೂ ಬದಿಗಳ ರಕಮುಗಳ ಬೇರೀಜು-ಗಳು ಸರಿಯಾಗುತ್ತವೆ. ಈ ರಕಮು ಪರಭಾರೆ ಇರುತ್ತದೆ. ಇದು ಈ ಖಾತೆಯು ಪಕ್ಕಾಬಾಕಿಯಾಗುವದರಿಂದ ಈ ರಕಮನ್ನು ಇದೇ ಖಾತೆಗೂ ಆಥಾವೆಗೂ ವಿರುದ್ಧ ಪರಿಣಾಮದಿಂದ ಏರಿಸಬೇಕು. ಹೀಗೆ ಮಾಡುವದರಿಂದ ಶಿಲಕಿನಲ್ಲಿ ಹೆಚ್ಚು ಕಡಿಮೆಯಾಗುವದಿಲ್ಲ

ಉದಾ:— (೧) ಕೆಳಗಿನ ಖಾತೆಯನ್ನು ಬಾಯಿಗೂಡಿಸಿರಿ.

ಖಾತೆ:— ರಾಮಣ್ಣ ಧಾರವಾಡ, ಹಳೆಪೇಟೆ, ಹುಬ್ಬಳ್ಳಿ.

| ಜಮೆ: | ರೂ. | ಖರ್ಚು | ರೂ. |
|---|---|---|---|
| ೬೨೦ ಕಿ. ಪಾ. ೧೬ ತಾ. | ೬-೨-೪೫ | ೮೦೦ ಕಿ. ಪಾ. ೨೦ ತಾ. | ೪-೩-೪೫ |
| ೭೫೦ ಕಿ. ಪಾ. ೨೭ ತಾ | ೭-೩-೪೫ | ೯೦೦ ಕಿ. ಪಾ. ೩೫ ತಾ. | ೫-೫-೪೫ |
| ೪೩೦ ಕಿ. ಪಾ ೩೮ ತಾ. | ೧೫-೩-೪೫ | ೭೦೦ ಕಿ. ಪಾ. ೪೨ ತಾ. | ೨೦-೪-೪೫ |

ಇಲ್ಲಿ ಜಮೆಯು ರಕಮು=(೬೨೦+೭೫೦+೪೩೦=) ೧೯೦೦ ರೂ.

ಖರ್ಚಿನ ,, = ೮೦೦+೯೦೦+೭೦೦=) ೨೪೦೦ ರೂ. ಖರ್ಚಿನ ರಕಮು ಹೆಚ್ಚಿಗೆ ಇರುವದು. ಆದದರಿಂದ ಪಕ್ಕಾಬಾಕಿಯನ್ನು ಈ ಖಾತೆಗೆ ಜಮೆಮಾಡಬೇಕು.

∴ ಪಕ್ಕಾಬಾಕಿ=(ಖರ್ಚಿನ ರಕಮು)—(ಜಮೆಯು ರಕಮು)

=೨೪೦೦ರೂ. —೧೮೦೦ ರೂ.

=೬೦೦ ರೂ.

ಈ ೭೦೦ ರೂ. ಗಳನ್ನು ರಾಮಣ್ಣ ಧಾರವಾಡ ಇವರ ಖಾತೆಗೆ ಜಮೆಮಾಡಬೇಕು. ಮತ್ತು ಈ ರಕಮು ಪರಭಾರೆ ಇದ್ದುದರಿಂದ ಆಥಾವೆಗೆ ಖರ್ಚು ಬರೆಯಬೇಕು.

ಯಾವ ವ್ಯವಹಾರವೇ ಆಗಲಿ ಅದನ್ನು ಕೀರ್ದಿಯಲ್ಲಿ ಬರೆಯದೆ ಅದರ ರಕಮು ಯೋಗ್ಯ ಖಾತೆಗೆ ಏರಲಾರದು. ಆದುದರಿಂದ ಮೊದಲು ಕೀರ್ದಿಯಲ್ಲಿ ಬರೆಯಬೇಕು.

( ತೋಂಡಮಿಳವಣಿ ) ಕೀರ್ದಿ

ತಾ. ೩೦—೪—೧೯೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೬೦೦ | ರಾಮಣ್ಣ ಧಾರವಾಡ ಖಾತೆ:— ತೋ. ಮಿ. ಬಗ್ಗೆ ಬರತಕ್ಕ ಬಾಕಿಯು ಉಳಿದ ಕಾರಣ ಅಧಾವೆಗೆ ಖರ್ಚು. ಖಾ. ಪಾ. ಪಾ. ನಂ. | ೬೦೦ | ಅಧಾವೆಯ ಖಾತೆ:— ತೋ. ಮಿ. ಬಗ್ಗೆ ರಾಮಣ್ಣ ಧಾರವಾಡ ಇವರಿಂದ ಬರತಕ್ಕದ್ದಿದ್ದದರಿಂದ ಅವರ ಖಾತೆಗೆ ಜಮೆ. ಖಾ. ಪಾ. ಪಾ. ನಂ. |

ಖತಾವಣಿ

ಖಾತೆ:— ರಾಮಣ್ಣ ಧಾರವಾಡ, ಹಳಪೇಟೆ, ಹುಬ್ಬಳ್ಳಿ

| ಜಮೆ | ರೂ. | ಖರ್ಚು | ರೂ. |
|---|---|---|---|
| ೬೦೦ | ಕೀ. ಪಾ. ೧೬ ತಾ. ೬-೨-೪೫ | ೮೦೦ | ಕೀ. ಪಾ. ೧೦ ತಾ. ೪.೮.೪೫ |
| ೭೫೦ | ಕೀ. ಪಾ. ೨೭ ತಾ. ೭.೩.೪೫ | ೯೦೦ | ಕೀ. ಪಾ. ೧೫ ತಾ. ೫.೪.೪೫ |
| ೪೫೦ | ಕೀ. ಪಾ. ೩೮ ತಾ. ೧೫-೪-೪೫ | ೨೦೦ | ಕೀ. ಪಾ. ೧೮ ತಾ. ೩೦-೪-೪೫ |
| ೬೦೦ | ಕೀ. ಪಾ. ೫೦ ( ತೋ. ಮಿ. ) | | |
| ೩೪೦೦ | | ೩೪೦೦ | |

ಖಾತೆ:— ( ಅಖೈರ ) ಅಧಾವೆ

ತಾ. ೩೦—೪—೧೯೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೬೦೦ | ರಾಮಣ್ಣ ಧಾರವಾಡ |

(ಬ) ಬಾಬಿನ ಖಾತೆಯ ತೋಂಡಮಿಳವಣಿಯ ಕ್ರಮ :—

ಬಾಬಿನ ಖಾತೆಯನ್ನಾದರೂ ಇಸಮಿನ ಖಾತೆಯಂತೆಯೇ ಬಾಕಿ ಗೂಡಿಸಬೇಕು.

ಉದಾ:— (೨) ಕೆಳಗಿನ ಪಗಾರ ಖಾತೆಯನ್ನು ಬಾಯಿಗೂಡಿಸಿರಿ

ಖತಾವಣಿ

ಪಗಾರ ಖಾತೆ

| ಜಮೆ ——— ರೂ. | ಖರ್ಚು ——— ರೂ. |
|---|---|
| | ೧೨೫ ಕೀ. ಪಾ. ೧೬ ತಾ. ೧೬-೨-೪೫ |
| | ೩೫ ಕೀ. ಪಾ. ೨೦ ತಾ. ೫-೩-೪೫ |
| | ೨೪೦ ಕೀ. ಪಾ. ೨೫ ತಾ. ೩-೪-೪೫ |

ಇಲ್ಲಿ ಜಮೆಯ ಕಡೆಗೆ ಯಾವ ರಕಮೂ ಇಲ್ಲ. ಖರ್ಚಿನ ರಕಮು=(೧೨೫+೩೫+೨೪೦=) ೪೦೦ ರೂ. ಖರ್ಚಿನ ರಕಮು ಹೆಚ್ಚಿಗೆ ಇರುತ್ತದೆ.

∴ ಕಚ್ಚಾ ಬಾಕಿ=(ಖರ್ಚಿನ ರಕಮು — ಜಮೆಯ ರಕಮು)

=೪೦೦ ರೂ.— ೦ ರೂ.

=೪೦೦ ರೂ.

ಈ ೪೦೦ ರೂ. ಗಳನ್ನು ಪಗಾರ ಖಾತೆಗೆ ಜಮೆ ಮಾಡಬೇಕು. ಕಚ್ಚಾ ಬಾಕಿ ಇದ್ದುದರಿಂದ ಅದನ್ನು ಲಾಭಹಾನಿಯ ಖಾತೆಗೆ ಖರ್ಚು ಬರೆಯಬೇಕು.

ತೋಂ. ಮಿ. ಕೀರ್ದಿ.

ತಾ. ೩೦—೩—೧೯೪೫ ಇ.

| ಜಮೆ ——— ರೂ. | ಖರ್ಚು ——— ರೂ. |
|---|---|
| ೪೦೦ ಪಗಾರ ಖಾತೆ:— ತೋಂಡಮಿಳವಣೆಯ ಬಗ್ಗೆ ಲಾಭಹಾನಿಯ ಖಾತೆಗೆ ಖರ್ಚು. | ೪೦೦ ಲಾಭಹಾನಿಯ ಖಾತೆ:— ತೋಂ. ಮಿ. ಬಗ್ಗೆ ಪಗಾರ ಖಾತೆಯ ಬಾಕಿ ಉಳಿದದ್ದರಿಂದ ಆ ಖಾತೆಗೆ ಜಮೆ. |
| ಖಾ. ಪಾ. ಪಾ. ನಂ. | ಖಾ. ಪಾ. ಪಾ. ನಂ. |

ಖತಾವಣಿ

ಪಗಾರ ಖಾತೆ

| ಜಮೆ ——— ರೂ. | ಖರ್ಚು ——— ರೂ. |
|---|---|
| ೪೦೦ ಕೀ. ಪಾ. ೨೦ (ತೋಂ. ಮಿ.) | ೧೨೫ ಕೀ. ಪಾ. ೧೦ ತಾ. ೧೬-೨-೪೫ |
| | ೩೫ ಕೀ. ಪಾ. ೨೦ ತಾ. ೫-೩-೪೫ |
| | ೨೪೦ ಕೀ. ಪಾ. ೨೫ ತಾ. ೩-೪-೪೫ |
| ೪೦೦ | ೪೦೦ |

## ಲಾಭಹಾನಿಯ ಖಾತೆ

ತಾ. ೧—೨—೪೫ರಿಂದ ೩೦—೪—೪೫ರ ವರೆಗೆ

ಜಮೆ———————————ರೂ. ಖರ್ಚು ————————ರೂ.

೪೦೦ ಪಗಾರ

(ಕ) ಜೀನಸುಗಳ ಖಾತೆಯನ್ನು ಬಾಯಿಗೂಡಿಸುವ ಕ್ರಮ:-

(೧) ಮೇಲೆ ಹೇಳಿದ ಎರಡು ಖಾತೆಗಳನ್ನು ಬಾಯಿಗೂಡಿಸುವದಕ್ಕಿಂತ ಜೀನಸಿನ ಖಾತೆಯನ್ನು ಬಾಯಿಗೂಡಿಸುವ ರೀತಿಯು ಬೇರೆ ಇರುತ್ತದೆ. ಜೀನಸಿನ ಖಾತೆಯನ್ನು ಮುಗಿಸುವ ಕಾಲಕ್ಕೆ ಸಾಧಾರಣವಾಗಿ ಶಿಲಕು ಮಾಲು ಉಳಿದಿರುತ್ತದೆ. ಆದುದರಿಂದ ಜೀನಸಿನ ಖಾತೆಗೆ ಬಹಳ ಮಾಡಿ ಒಂದು ಪಕ್ಕಾ, ಒಂದು ಕಚ್ಚಾ ಹೀಗೆ ಎರಡು ಬಾಕಿಗಳು ಇರುತ್ತವೆ

ಶಿಲಕು ಮಾಲು ಉಳಿಯದಿದ್ದರೆ ಇಸಮಿನ ಅಥವಾ ಬಾಬಿನ ಖಾತೆಯಂತೆಯೇ ಜೀನಸಿನ ಖಾತೆಯನ್ನಾದರೂ ಬಾಯಿಗೂಡಿಸಬೇಕು. ಶಿಲಕು ಮಾಲು ಉಳಿದಿದ್ದರೆ ಮೊದಲು ಕೊಂಡ ದರದಂತೆ, ಅಥವಾ ಆ ಕಾಲಕ್ಕೆ ಅದರ ದರವು ಕಡಿಮೆಯಾಗಿದ್ದರೆ ಕಡಿಮೆಯಾದ ದರದಂತೆ ಶಿಲಕು ಮಾಲಿನ ಬೆಲೆಯನ್ನು ಮಾಡಬೇಕು. ಮಾರುವ ದರವು ಹೆಚ್ಚಿಗೆ ಇದ್ದಾಗ ಅದರಂತೆ ಶಿಲಕು ಮಾಲಿನ ಬೆಲೆಯನ್ನು ಮಾಡಿದರೆ ವ್ಯಾಪಾರ ಮಾಡದೆ ಲಾಭ ತೆಗೆದುಕೊಂಡಂತೆ ಆಗುತ್ತದೆ. ಆದುದರಿಂದ ಹತ್ತರ ಇದ್ದ ಮಾಲು ಮಾರಿತೆಂದು ಭಾವಿಸಿ ಅದರ ಬೆಲೆಯನ್ನು ಜೀನಸಿನ ಖಾತೆಗೆ ಜಮೆ ಮಾಡಬೇಕು. ಈ ಬಾಕಿಯು ಪಕ್ಕಾ ಇರುವದರಿಂದ ಅದರ ರಕಮು ಪರಭಾರೆ ಇರುತ್ತದೆ. ಆದುದರಿಂದ ಆಢಾವೆಗೆ ಖರ್ಚು ಬರೆಯಬೇಕು. ಇಷ್ಟಾದ ಬಳಿಕ ಬಾಬಿನ ಖಾತೆಯಂತೆಯೇ ಬಾಯಿಗೂಡಿಸಬೇಕು. ಅಂದರೆ, (೧) ಖರ್ಚಿನ ರಕಮಿಗೆ ಜಮೆಯ ರಕಮು ಸರಿಯಾದರೆ ಲಾಭವೂ ಇಲ್ಲ, ಹಾನಿಯೂ ಇಲ್ಲ (೨) ಖರ್ಚಿನ ರಕಮು ಜಮೆಯ ರಕಮಿಗಿಂತ ಹೆಚ್ಚಾದಷ್ಟು ಹಾನಿಯೆಂದು ಜಮೆಯ ರಕಮು ಹೆಚ್ಚಾದಷ್ಟು ಲಾಭ ಎಂದು ತಿಳಿಯಬೇಕು.

ಒಂದನೆಯ ಪ್ರಕಾರದ ಖಾತೆಗಳಲ್ಲಿ ಒಂದು ಬಾಕಿಯು, ೨ನೆಯ ಮತ್ತು ೩ನೆಯ ಪ್ರಕಾರದ ಖಾತೆಗಳಲ್ಲಿ ಎರಡು ಬಾಕಿಗಳು, ಒಂದು ಕಚ್ಚಾ,

ಮತ್ತೊಂದು ಪಕ್ಕಾ ಇರುತ್ತದೆ. ಬಾಕಿಯು ರಕಮು ಸರಫಾರಿ ಇದ್ದದರಿಂದ ೧ನೆಯದರಲ್ಲಿಯ ಲಾಭದ ರಕಮನ್ನು ಆ ಖಾತೆಗೆ ಖರ್ಚು ಬರೆದು ಲಾಭ ಹಾನಿಯ ಖಾತೆಗೆ ಜಮೆ ಮಾಡಬೇಕು. ೨ನೆಯದರಲ್ಲಿಯ ಹಾನಿಯ ರಕಮನ್ನು ಆ ಖಾತೆಗೆ ಜಮೆ ಮಾಡಿ ಲಾಭಹಾನಿಯ ಖಾತೆಗೆ ಖರ್ಚು ಬರೆಯಬೇಕು.

ಉದಾ:—(೧) ಬಂಗಾರದ ಖಾತೆಯನ್ನು ಬಾಯಿಗೂಡಿಸಿರಿ

ಖತಾವಣಿ



ಬಂಗಾರದ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೧೮೦೦ ತೊ. ೩೦ ಕೀ. ಪಾ. ೬೦ ತಾ. ೧೦—೨—೪೫ | | ೮೦೦ ತೊ. ೨೦ ಕೀ. ಪಾ. ೪೦ ತಾ. ೧೩—೧—೪೫ | |
| ೧೬೦೦ ,, ೨೫ ಕೀ. ಪಾ. ೬೪ ತಾ. ೫—೪—೪೫ | | ೭೫೦ ,, ೧೫ ಕೀ. ಪಾ. ೫೦ ತಾ. ೮—೨—೪೫ | |
| | | ೧೨೦೦ ,, ೩೦ ಕೀ. ಪಾ. ೪೦ ತಾ. ೧೨—೪—೪೫ | |

ಪ್ರತಿಯೊಂದು ತರದ ಬಂಗಾರವು ಎಷ್ಟು ಉಳಿದಿದೆಂಬದನ್ನು ಮೊದಲು ಗೊತ್ತು ಮಾಡಬೇಕು. ಇಲ್ಲಿ ಉಳಿದದ್ದೆಲ್ಲ ೩ನೆಯ ತರದ್ದೊಂದು ಎಣಿಸಿದೆ.

ಕೊಂಡ ಬಂಗಾರ=(೨೦+೧೫+೩೦=) ೬೫ ತೊಲೆಗಳು.

ಮಾರಿದ ಬಂಗಾರ=(೩೦+೨೫=) ೫೫ ತೊಲೆಗಳು.

ಉಳಿದ ಬಂಗಾರ=(೬೫—೫೫=) ೧೦ ತೊಲೆಗಳು.

∴ ಪಕ್ಕಾ ಬಾಕಿ=(೬೫—೫೫) ೧೦ ತೊಲೆ, ಬಂಗಾರದ ಬೆಲೆಯು

=೧೦×೪೦=೪೦೦ ರೂ.

ಬಂಗಾರ ತೊಲೆ ೧೦, ದರ ೪೦ ರೂ. ಪ್ರ.

∴ ೪೦೦ ರೂ. ಬಂಗಾರದ ಖಾತೆಗೆ ಜಮೆ, ಆಧಾವೆಯ ಖಾತೆಗೆ ಖರ್ಚು, ಇನ್ನು ಬಂಗಾರದ ಖಾತೆಯ ಲಾಭವನ್ನು ತೆಗೆಯುವಾ.

ಜಮೆಯ ರಕಮು=(೧೮೦೦+೧೬೦೦+೪೦೦) ೩೮೦೦ ರೂ.

ಖರ್ಚಿನ ರಕಮು=(೮೦೦+೭೫೦+೧೨೦೦=) ೨೭೫೦ ರೂ.

ಬಂಗಾರದಿಂದಾದ ಲಾಭ=(೩೮೦೦—೨೭೫೦)=೧೦೫೦ ರೂ.

∴ ಈ ೧೦೫೦ ರೂ ಬಂಗಾರದ ಖಾತೆಗೆ ಖರ್ಚು ಬರೆದು ಲಾಭ-ಹಾನಿಯ ಖಾತೆಗೆ ಜಮೆ ಮಾಡಬೇಕು.

ತೋ. ಮಿ. ರೀದಿ.

ತಾ. ೩೦—೪—೧೯೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೪೦೦ ಬಂಗಾರದ ಖಾತೆ:— ತೋ. ಮಿ. ಬಗ್ಗೆ ಶಿಲಕು ಮಾಲು ತೊ. ೧೦, ದರ ೫೦ ರೂ. ಪ್ರ. ಆದದರಿಂದ ಅಡ್ಡಾವೆಗೆ ಖರ್ಚು. ಖಾ. ಪಾ. ಪಾ. ನಂ. | | ೪೦೦ ಅಡ್ಡಾವೆಯ ಖಾತೆ:— ತೋ. ಮಿ. ಬಗ್ಗೆ ಬಂಗಾರ ತೊ. ೧೦, ದರ ೫೦ ರೂ ಪ್ರ. ಶಿಲಕು ಮಾಲು ಉಳಿದದ್ದರಿಂದ ಆ ಖಾತೆಗೆ ಜಮೆ. ಖಾ ಪಾ. ಪಾ. ನಂ. | |
| ೧೦೫೦ ಲಾಭಹಾನಿಯ ಖಾತೆ:— ತೋ. ಮಿ. ಬಗ್ಗೆ ಬಂಗಾರದ ಖಾತೆಯಿಂದ ಲಾಭವಾದದ್ದರಿಂದ ಆ ಖಾತೆಗೆ ಖರ್ಚು. ಖಾ. ಪಾ. ಪಾ. ನಂ. | | ೧೦೫೦ ಬಂಗಾರದ ಖಾತೆ:— ತೋ. ಮಿ. ಬಗ್ಗೆ ಲಾಭವಾದದ್ದರಿಂದ ಲಾಭಹಾನಿಯ ಖಾ. ಜಮೆ. ಖಾ. ಪಾ. ಪಾ. ನಂ. | |

## ಖತಾವಣಿ

### ಬಂಗಾರದ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೧೮೦೦ ತೊ. ೩೦ ಕೀ. ಪಾ. ೬೦ ತಾ. ೧೦—೨—೪೫ | | ೮೦೦ ತೊ. ೨೦ ಕೀ. ಪಾ. ೨೦ ತಾ. ೧೩—೧—೪೫ | |
| ೧೬೦೦ ತೊ. ೨೫ ಕೀ. ಪಾ. ೬೪ ತಾ. ೫—೩—೪೫ | | ೭೫೦ ತೊ. ೧೫ ಕೀ. ಪಾ. ೨೮ ತಾ ೮—೨—೪೫ | |
| ೪೦೦ ತೊ. ೧೦ (ಶಿಲಕು) ತಾ. ೩೧—೪—೪೫ | | ೧೨೦೦ ತೊ. ೩೦ ಕೀ ಪಾ ೪೦ ತಾ. ೧೫—೩—೪೫ | |
| | | ೧೦೫೦ (ತೋ. ಮಿ.) ಕೀ. ಪಾ. ತಾ. ೩೧—೪—೪೫ | |
| ೩೮೦೦ | | ೩೮೦೦ | |

### ಲಾಭಹಾನಿಯ ಖಾತೆ

ತಾ. ೧—೧—೪೫ರಿಂದ ೩೦—೪—೪೫ವರೆಗೆ

| ಜಮೆ——————ರೂ. | ಖರ್ಚು——————ರೂ. |
|---|---|
| ೧೨೫೦ ಬಂಗಾರದಿಂದಾದ ಲಾಭ | ೪೦೦ ಪಗಾರ |

### ಅಖೈರ ಆಢಾವೆಯ ಖಾತೆ

ತಾ. ೩೦—೪—೧೯೪೫ ಇ.

| ಜಮೆ——————ರೂ. | ಖರ್ಚು——————ರೂ. |
|---|---|
| | ೬೦೦ ರಾಮಣ್ಣ ಧಾರವಾಡ |
| | ೪೦೦ ಬಂಗಾರ |

(೨) ತಿರುಗಿ ಬಂದಾಗ ಅಥವಾ ಹೋದಾಗ ಜೀನಸಿನ ಖಾತೆಯು ಬಾಯಿಗೂಡಿಸುವ ಕ್ರಮು:—

ವಾಪಸ ಬಂದ ಜೀನಸುಗಳ ಸಂಖ್ಯೆಯು ಸ್ವಲ್ಪ ಅಥವಾ ಬಹಳವಿದ್ದು ಅವುಗಳ ಬೆಲೆಯು ಕಡಿಮೆಯಾಗಿದ್ದರೆ, ಆಯಾ ಜೀನಸುಗಳ ಖಾತೆಗಳಿಗೆ ಅವುಗಳ ಬೆಲೆಯ ರಕಮನ್ನು ಖರ್ಚು ಬರೆಯಬೇಕು. ಅಂದರೆ ಮಾರಾಟದ ಬೆಲೆಗೆ ಜೀನಸನ್ನು ಕೊಂಡಂತೆ ಆಗುತ್ತದೆ. ಇಲ್ಲಿ ಶಿಲಕು ಮಾಲಿನ ಬೆಲೆಯನ್ನು ಮುಂದೆ ಹೇಳಿದಂತೆ ಮಾಡಬೇಕು.

ಖಾತೆಯನ್ನು ಬಾಯಿಗೂಡಿಸುವದಕ್ಕಿಂತ ಮೊದಲು, ವಾಪಸ ಬಂದ ಜೀನಸುಗಳ ಬೆಲೆಯನ್ನು ಮಾರಾಟದ ದರದಂತೆ ಮಾಡದೆ ಮೂಲ ದರದಂತೆ ಅಥವಾ ಮಾರಾಟದ ದರವು ಕಡಿಮೆಯಾಗಿದ್ದರೆ ಕಡಿಮೆ ದರದಂತೆ ಮಾಡಬೇಕು. ಇಲ್ಲವಿದ್ದರೆ ಲಾಭವಾಗದೆ ಲಾಭ ತೋರಿಸಿದಂತೆ ಆಗುತ್ತದೆ. ಇಷ್ಟಾದ ಬಳಿಕ ಜೀನಸಿನ ಖಾತೆಯಂತೆ ಬಾಯಿಗೂಡಿಸಬೇಕು.

ಉದಾ:— (೪) ರುಮಾಲದ ಖಾತೆಯನ್ನು ಬಾಯಿಗೂಡಿಸಿರಿ

### ಖತಾವಣಿ

### ರುಮಾಲದ ಖಾತೆ

| ಜಮೆ——————ರೂ. | ಖರ್ಚು——————ರೂ. |
|---|---|
| ೧೬೦ ರೂ. ೮ ಕೀ. ಸಾ. ೧೨ | ೩೦೦ ರೂ. ೨೦ ಕೀ. ಸಾ. ೭ |
| ತಾ. ೧೮—೩—೪೫ | ತಾ. ೪—೨—೪೫ |

| | |
|---|---|
| ೨೦೦ ರೂ. ೧೦ ಕೀ. ಪಾ. ೧೩ | ೪೦ ರೂ. ೨ (ವಾ.) ಕೀ. ಪಾ. ೧೩ |
| ತಾ. ೨೦—೩—೪೫ | ತಾ. ೨೦—೩—೪೫ |
| ೪೦೦ ರೂ. ೧೬ ಕೀ. ಪಾ. ೨೦ | ೬೦೦ ರೂ. ಕೀ. ಪಾ. ೧೯ |
| ತಾ. ೮—೪—೪೫ | ತಾ. ೭—೪—೪೫ |
| | ೧೦೦ ರೂ. ೪ (ವಾ.) ಕೀ. ಪಾ. ೨೧ |
| | ತಾ. ೧೦—೪—೪೫ |

ಇಲ್ಲಿ ಕೊಂಡ ಮತ್ತು ವಾಪಸ ಬಂದ ರುಮಾಲಗಳು=೨೦+೨+೩೦+೪=೫೬.
ಮಾರಿದ ,, ,, ,, ,, =೮+೧೦+೧೬=೩೪.
∴ ಶಿಲಕು ರುಮಾಲಗಳು=೫೬—೩೪=೨೨.

ಈ ೨೨ ರುಮಾಲಗಳಲ್ಲಿ ರುಮಾಲ ೨, ದರ ೧೫ ರೂ. ಪ್ರ. ಮತ್ತು ರುಮಾಲ ೪ ದರ ೨೦ ರೂ. ಪ್ರ. ತಿರುಗಿ ಬಂದವು. ರುಮಾಲ ೨, ದರ ೧೫ ರೂ. ಪ್ರ. ಮತ್ತು ರುಮಾಲ ೧೪, ದರ ೨೦ ರೂ, ಪ್ರ, ಶಿಲಕು ಉಳಿದಿರುತ್ತವೆ.

∴ ಶಿಲಕು ಮಾಲಿನ ಬೆಲೆಯು= ೨×೧೫+೪×೨೦+೨×೧೫+೧೪×೨೦) ರೂ.
=(೪×೧೫+೧೮×೨೦) ರೂ
=(೬೦+೩೬೦) ರೂ.
=೪೨೦ ರೂ

∴ ೪೨೦ ರೂ. ರುಮಾಲ ಖಾತೆಗೆ ಜಮೆ, ಮತ್ತು ಅಢಾವೆಯ ಖಾತೆಗೆ ಖರ್ಚು ಬರೆಯಬೇಕು.

ಇನ್ನು ಈ ಖಾತೆಯ ಜಮೆಯ ರಕಮು=(೧೬೦+೨೦೦+೪೦೦+೪೬೦) ೧೧೮೦ ರೂ.
,, ಖರ್ಚಿನ ,, =(೩೦೦+೪೦+೬೦೦+೧೦೦) ೧೦೮೦ ರೂ.
∴ ರುಮಾಲದ ಖಾತೆಯಿಂದ ಬಂದ ಲಾಭ=೧೧೮೦ರೂ.−೧೦೪೦ರೂ= ೧೪೦ ರೂ. ಈ ೧೪೦ ರೂ ಗಳನ್ನು ರುಮಾಲದ ಖಾತೆಗೆ ಖರ್ಚು, ಲಾಭಹಾನಿಯ ಖಾತೆಗೆ ಜಮೆ ಮಾಡಬೇಕು.

ತೋಂಡಮಿಳವಣಿಯ ಕೀರ್ದಿ.

ತಾ. ೩೦—೫—೧೯೪೫ ಇ

| ಜಮೆ——— ರೂ. | ಖರ್ಚು——— ರೂ. |
|---|---|
| ೪೨೦ ರುಮಾಲದ ಖಾತೆ:— | ೪೨೦ ಅಯ್ಯರ ಅಢಾವೆಯ ಖಾತೆ:— |
| ತೋ. ಮಿ. ಬಗ್ಗೆ ಶಿಲಕು ಮಾಲು | ತೋ. ಮಿ. ಬಗ್ಗೆ |
| ಅಢಾವೆಗೆ ಖರ್ಚು. | ೬೦ ರೂ ರುಮಾಲ, ೪ ದರ ೧೫ |
| ಖಾ. ಪಾ. | ರೂ ಪ್ರ. |

೧೪೦ ಲಾಭಹಾನಿಯ ಖಾತೆ:—
ತೋ. ಮಿ. ಬಗ್ಗೆ ರುಮಾಲದ ಬಗ್ಗೆ ಖಾತೆಯಿಂದ ಲಾಭ ಬಂದದ್ದರಿಂದ ಆ ಖಾತೆಗೆ ಖರ್ಚು.
ಖಾ. ಪಾ. ಪಾ. ನಂ.

೩೬೦ ರೂ. ರುಮಾಲ ೧೮, ದರ ೨೦

೪೨೦ ರೂ. ರುಮಾಲದ ಖಾತೆಗೆ ಜಮೆ.
ಖಾ. ಪಾ. ಪಾ. ನಂ.

೧೪೦ ರುಮಾಲದ ಖಾತೆ:—
ತೋ. ಮಿ. ಬಗ್ಗೆ ಲಾಭವಾದದ್ದರಿಂದ ಲಾಭಹಾನಿಯ ಖಾತೆಗೆ ಜಮೆ.
ಖಾ. ಪಾ. ಪಾ. ನಂ.

## ಖತಾವಣಿ

### ರುಮಾಲದ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೧೬೦ ರೂ. ೮ ಕೀ. ಪಾ. ೧೨ ತಾ ೭—೩—೪೫ | | ೩೦೦ ರೂ. ೨೦ ಕೀ. ಪಾ. ೧೭ ತಾ. ೮—೩—೪೫ | |
| ೨೦೦ ರೂ. ೧೦ ಕೀ. ಪಾ. ೨೮ ತಾ. ೨೦—೩—೪೫ | | ೪೦ ರೂ. (ವಾ) ಕೀ. ಪಾ. ೨೮ ತಾ. ೨೦—೩—೪೫ | |
| ೪೦೦ ರೂ. ೧೬ ಕೀ. ಪಾ. ೪೦ ತಾ. ೮—೪—೪೫ | | ೬೦೦ ರೂ. ಕೀ. ಪಾ. ೩೯ ತಾ ೭—೪—೪೫ | |
| ೪೨೦ (ಶಿಲಕು ಮಾಲು) ಕೀ. ಪಾ. ೬೦ ತಾ. ೩೧—೪—೪೫ | | ೧೦೦ ರೂ. ೪ (ವಾ) ಕೀ. ಪಾ. ೫೦ ತಾ. ೧೫—೪—೪೫ | |
| | | ೧೪೦ ರೂ. (ಲಾಭ ತೋ. ಮಿ.) ತಾ. ೩೧—೪—೪೫ | |
| ೧೧೮೦ | | ೧೧೮೦ | |

### ಲಾಭಹಾನಿಯ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೧೦೫೦ ಲಾಭ (ಬಂಗಾರ) | | ೪೦೦ ಪಗಾರ | |
| ೧೪೦ ಲಾಭ (ರುಮಾಲ) | | | |

### ಅಪ್ಪೈರ ಅಥಾವೆಯ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೬೦೦ ರಾಮಣ್ಣ ಧಾರವಾಡ | |
| | | ೪೦೦ ಬಂಗಾರ ಶಿಲಕು | |
| | | ೪೨೦ ರುಮಾಲ ಶಿಲಕು | |

## (೩) ಮನೆಯ ಜಮಾಖರ್ಚಿನ ಖಾತೆಗಳ ತೋಂಡಮಿಳವಣಿ:-

ಇಸಮಿನ ಅಥವಾ ಬಾಬಿನ ಖಾತೆಯಂತೆ ಈ ಖಾತೆಗಳನ್ನೂ ಬಾಯಿಗೂಡಿಸಬೇಕು. ಆದರೆ ಯಾವದಾದರೊಂದು ಖಾತೆಯಲ್ಲಿ ಬಹಳ ಬೆಲೆಯ ಮಾಲು ಶಿಲಕು ಉಳಿದಿದ್ದರೆ, ಅದರ ಬೆಲೆಯನ್ನು ಅದೇ ಖಾತೆಗೆ ಜಮೆಮಾಡಿ, ಅಥಾವೆಗೆ ಖರ್ಚು ಬರೆಯಬೇಕು.

ಉದಾ — (೫) ಜವಳಿಯ ಖಾತೆಯನ್ನು ಬಾಯಿಗೂಡಿಸಿರಿ

### ಜವಳಿ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| | | ೭೫ ಕೀ. ಪಾ. ೨ ತಾ. ೪-೨-೪೫ | |
| | | ೧೫ ಕೀ. ಪಾ. ೭ ತಾ. ೬-೩-೪೫ | |
| | | ೨೦ ಕೀ. ಪಾ. ೧೦ ತಾ. ೮-೩ ೪೫ | |
| | | ೧೮ ಕೀ. ಪಾ. ೧೨ ತಾ. ೧೫-೪-೪೫ | |

ಶಿಲಕು ಮಾಲು:— ಜರದ ಪತ್ತಲ ೭೫ ರೂ.

ಧೋತರ, ಅಂಗಿ ಟೊಪ್ಪಿಗೆ, ಸೀರೆ, ಖಣ ಮುಂತಾದ ದಿನಂಪ್ರತಿ ಉಪಯೋಗಿಸಿ ಹರಿದು ಹೋಗುವಂಥ ಅರಿವೆಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು. ಇನ್ನು ಹೆಚ್ಚಿನ ಬೆಲೆಯ ರೇಸಿಮೆ ಅಥವಾ ಜರದ ಅರಿವೆಗಳು ಅನೇಕ ವರ್ಷಗಳ ವರೆಗೆ ಬಾಳುವವು. ಅದ್ದರಿಂದ ಅವುಗಳ ಬೆಲೆಯನ್ನು ಈ ಖಾತೆಗೆ ಜಮೆ ಮಾಡಿ, ಅಥಾವೆಗೆ ಖರ್ಚು ಬರೆಯಬೇಕು.

ಇಲ್ಲಿ ೭೫ ರೂ. ಜರದ ಪತ್ತಲದ ಬೆಲೆ ಪಕ್ಕಾ ಬಾಕಿಯಾಗುವದರಿಂದ ಇದೇ ಖಾತೆಗೆ ಜಮೆ ಬರೆದು, ಅಥಾವೆಗೆ ಖರ್ಚು ಬರೆಯಬೇಕು.

ಇನ್ನು ಈ ಖಾತೆಯ ಜಮೆಯ ರಕಮು= ೭೫ ರೂ.

,, ಖರ್ಚಿನ ,, =೧೨೮ ರೂ.

∴ ಖರ್ಚಾದ ಜವಳಿಯ ಬೆಲೆ =೧೨೮ ರೂ.—೭೫ ರೂ.=೫೩ ರೂ.

∴ ೫೩ ರೂ. ಜವಳಿಯು ಖಾತೆಗೆ ಜಮೆ. ಉತ್ಪನ್ನ ಖರ್ಚಿನ ಖಾತೆಗೆ ಖರ್ಚು ಬರೆಯಬೇಕು.

## ತೋಂಡಮಿಳವಣಿ ಕೀರ್ದಿ

ತಾ. ೩೧—೩—೧೯೪೫ ಇ.

| ಜಮೆ —— ರೂ. | ಖರ್ಚು —— ರೂ. |
| --- | --- |
| ೧೨೮ ಜವಳಿ ಖಾತೆ:—<br>ತಪಶೀಲು—<br>ತೋ. ಮಿ. ಬಗ್ಗೆ<br>೭೫ ರೂ. ಶಿಲಕು ಮಾಲು ಅಥಾವೆಗೆ ಖರ್ಚು.<br>೫೩ ರೂ. ಜವಳಿ ಉ. ಖ. ಖಾತೆ ಖರ್ಚು.<br>೧೨೮<br>ಖಾ. ಪಾ. | ೫೩ ಉತ್ಪನ್ನ ಖರ್ಚಿನ ಖಾತೆ:—<br>ತೋ. ಮಿ. ಬಗ್ಗೆ ಜವಳಿ ಖಾತೆಗೆ ಜಮೆ.<br>ಖಾ. ಪಾ. ಪಾ. ಸಂ.<br>೭೫ ಅಥಾವೆಗೆ:—<br>ಜವಳಿ ಖಾತೆಗೆ ಜಮೆ.<br>ಖಾ. ಪಾ. |

## ಖತಾವಣಿ

### ಜವಳಿ ಖಾತೆ

| ಜಮೆ —— ರೂ. | ಖರ್ಚು —— ರೂ. |
| --- | --- |
| ೧೨೮ ಕೀ. ಪಾ. ೧೬ ತಾ. ೩೧ | ೭೫ ಕೀ. ಪಾ. ೨ ತಾ. ೪—೨—೪೫ |
| | ೧೫ ಕೀ. ಪಾ. ೭ ತಾ. ೬—೩—೪೫ |
| | ೨೦ ಕೀ. ಪಾ. ೧೦ ತಾ. ೮—೩—೪೫ |
| | ೧೮ ಕೀ. ಪಾ. ೧೨ ತಾ. ೧೫—೪—೪೫ |
| ೧೨೮ | ೧೨೮ |

### ಉತ್ಪನ್ನ ಖರ್ಚಿನ ಖಾತೆ

ತಾ ೧—೧—೪೫ರಿಂದ ೩೧—೩—೪೫ ಪೂರ್ತ

| ಜಮೆ —— ರೂ. | ಖರ್ಚು —— ರೂ. |
| --- | --- |
| | ೫೩ ಜವಳಿ |

### ಅಥಾವೆಯ ಖಾತೆ

ತಾ. ೩೧—೩—೪೫

| ಜಮೆ —— ರೂ. | ಖರ್ಚು —— ರೂ. |
| --- | --- |
| | ೭೫ ಜವಳಿ |

೭. ಖರೀದಿ ವಿಕ್ರೀ ಖಾತೆಯೂ ಅದರ ತೋಂಡಮಿಳವಣಿಯೂ:- ಮಾರಾಟ ಮಾಡುವ ಜೀನಸುಗಳು ಬಹಳ ಇದ್ದು ಪ್ರತಿಯೊಂದು ಜೀನಸಿನ ಲಾಭವು ಮುಂದಿಗೆ ಗೊತ್ತಾಗಬಾರದೆಂಬದಿದ್ದರೆ, ಪ್ರತಿಯೊಂದು ಜೀನಸಿಗೆ ಬೇರೆ ಬೇರೆ ಖಾತೆಗಳನ್ನಿಡದೆ ಶಿಲಕು ಮಾಲಿನ ಖಾತೆ, ಖರೀದಿ ಖಾತೆ, ವಿಕ್ರೀ ಖಾತೆ, ಖರೀದಿ ವಿಕ್ರೀ ಖಾತೆ ಎಂಬ ನಾಲ್ಕು ಖಾತೆಗಳನ್ನು ಇಡುವರು. ಶಿಲಕು ಮಾಲು ಶಿಲಕು ಮಾಲು ಖಾತೆಗೂ, ಖರೀದಿ ಮಾಡಿದ ಮಾಲು ಖರೀದಿ ಖಾತೆಗೂ ಖರ್ಚು ಬರೆಯುತ್ತಾರೆ. ಮಾರಿದ ಮಾಲು ವಿಕ್ರೀ ಖಾತೆಗೆ ಜಮೆ ಮಾಡುತ್ತಾರೆ. ವಾಪಸು ಬಂದ ಜೀನಸುಗಳನ್ನು ವಿಕ್ರೀ ಖಾತೆಗೆ ಖರ್ಚು ಬರೆಯುತ್ತಾರೆ. ವಾಪಸ ಹೋದ ಜೀನಸುಗಳನ್ನು ಖರೀದಿ ಖಾತೆಗೆ ಜಮೆ ಮಾಡುತ್ತಾರೆ. ಹೀಗೆ ಮಾಡುವದರಿಂದ ನಿಜವಾಗಿ ಮಾರಿದ ಮತ್ತು ಕೊಂಡ ಜೀನಸುಗಳ ಬೆಲೆಯು ಗೊತ್ತಾಗುತ್ತದೆ. ಅಥವಾ ವೆಯ ಕಾಲಕ್ಕೆ ಅದೇ ಅವಧಿಯ ಕೊನೆಯ ದಿವಸದ ಶಿಲಕು ಮಾಲು ಖಾತೆ ಖರೀದಿ ಖಾತೆ, ಮತ್ತು ವಿಕ್ರೀ ಖಾತೆ ಇವುಗಳನ್ನು ತೋಂಡಮಿಳವಣಿ ಮಾಡಿ ಅವುಗಳ ಬಾಕಿಗಳನ್ನು ಖರೀದಿ-ವಿಕ್ರೀ ಖಾತೆಗೆ ಎತ್ತುವರು. ಜೀನಸಿನ ಯಾದಿಯಿಂದ ಶಿಲಕು ಮಾಲಿನ ಬೆಲೆಯನ್ನು ತೆಗೆಯುವದು ಸುಲಭವಾಗುತ್ತದೆ. ಕಡೆಗೆ ಜೀನಸಿನ ಖಾತೆಯಂತೆ ಖರೀದಿ-ವಿಕ್ರೀ ಖಾತೆಯ ತೋಂಡಮಿಳವಣಿಯನ್ನು ಮಾಡಬೇಕು. ಅಂದರೆ ಜೀನಸುಗಳ ಮಾರಾಟದಿಂದಾದ ಒಟ್ಟು ಲಾಭ ಅಥವಾ ಹಾನಿ ಮತ್ತು ಶಿಲಕು ಮಾಲು ಒಂದೇ ಕಡೆಯಲ್ಲಿ ಗೊತ್ತಾಗುತ್ತವೆ.

ಉದಾ:— (೬) ಮೋಳಿನ ಬಂಗಾರ ಮತ್ತು ರುಮಾಲ ಖಾತೆಗಳು.

ಖತಾವಣಿ

ಖರೀದಿ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೩೬೫೦ ಕೊಂಡ ಜೀನಸು. | | ೮೦೦ ತೊ. ೨೦ ಕೀ. ಪಾ. ೨೦ | |
| | | ತಾ. ೧೦—೧—೪೫ | |
| ೩೬೫೦ | | | |
| | | ೭೫೦ ತೊ. ೧೫ ಕೀ. ಪಾ, ೩೦ | |
| | | ತಾ. ೮—೨—೪೫ | |

೧೨೦೦ ತೊ. ೩೧ ಕೀ. ಪಾ. ೩೬
ತಾ. ೧೨—೩—೪೫
೩೦೦ ರೂ. ೨೦ ಕೀ. ಪಾ. ೫೦
ತಾ. ೨೦—೪—೪೫
೬೦೦ ರೂ. ೩೦ ಕೀ. ಪಾ. ೫೬
ತಾ. ೩೦—೪—೪೫

೩೬೫೦

## ವಿಕ್ರೀ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೧೮೦೦ ತೊ. ೩೦ ಕೀ. ಪಾ. ತಾ. | | ೪೦ ರೂ. ೨ ಕೀ. ಪಾ. ತಾ. | |
| ೧೬೦೦ ತೊ. ೨೫ ಕೀ. ಪಾ. ತಾ. | | ೧೦೦ ರೂ. ೪ ಕೀ. ಪಾ ತಾ. | |
| ೧೬೦ ರೂ. ೮ ಕೀ. ಪಾ. ತಾ. | | ೪೦೨೦ ಮಾರಿದ ಜೀನಸು | |
| ೪೦೦ ರೂ. ೧೬ ಕೀ ಪಾ. ತಾ. | | | |
| ೨೦೦ ರೂ. ೧೦ ಕೀ. ಪಾ. ತಾ. | | | |
| ೪೧೬೦ | | ೪೧೬೦ | |

## ಖರೀದಿ ವಿಕ್ರೀ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೪೦೨೦ ಮಾರಿದ ಮಾಲು | | ೩೬೫೦ ಖರೀದಿ ಮಾಲು | |
| ೮೨೦ ಶಿಲಕು ಮಾಲು | | ೧೧೯೦ ಒಟ್ಟು ಲಾಭ | |
| ೪೮೪೦ | | ೪೮೪೦ | |

ಕೀರ್ದಿ ಖತಾವಣೆಗಳನ್ನು ಹಿಂದಿನಂತೆಯೇ ಬರೆಯುಬೇಕು.

೮. **ಅಖೈರ ಅಥಾವೆಯ ತೋಂಡಮಿಳವಣಿಯು:—** ಒಂದು ಸಣ್ಣ ವ್ಯಾಪಾರದ ಜಮಾಖರ್ಚನ್ನು ತೋರಿಸಬೇಕೆಂದು ಈ ಮೊದಲು ಮತ್ತು ಮುಂದೆ ಕೊಟ್ಟ ಖಾತೆಗಳು ಒಬ್ಬ ವ್ಯಾಪಾರಸ್ಥನ ಖತಾವಣಿಯೊಳಗಿನವೆಂದೂ ಕಡೆಯ ದಿವಸದ ರೋಖು ಶಿಲಕು ೭೦ ರೂ. ಗಳೆಂದೂ ಭಾವಿಸಿದೆ. ಹಿಂದೆ ಹೇಳಿದಂತೆ ೭೦ ರೂ. ಗಳನ್ನು ಕೀರ್ದಿಯಲ್ಲಿ ಖರ್ಚಿನ ಕಡೆಗೆ ಬರೆದ ಕೂಡಲೆ ಅಥಾವೆಯ ಖಾತೆಗೂ ಖರ್ಚು ಬರೆಯುಬೇಕು. ಖತಾವಣೆಯೊಳಗಿನ ಎಲ್ಲ ಖಾತೆಗಳನ್ನು ಬಾಯಿಗೂಡಿಸುವದರಿಂದ ಲಾಭಹಾನಿಯು

ಖಾತೆಯೂ, ಅಢಾವೆಯ ಖಾತೆಯೂ ತಯಾರಾಗುತ್ತವೆ. ಏರತಕ್ಕ ಎಲ್ಲ ಕಚ್ಚಾಬಾಕಿಗಳನ್ನು ಲಾಭಹಾನಿಯ ಖಾತೆಗೂ, ಪಕ್ಕಾ ಬಾಕಿಗಳನ್ನು ಅಢಾವೆಯ ಖಾತೆಗೂ ಒಯ್ದ ಮೇಲೆ ಲಾಭಹಾನಿಯ ಖಾತೆಯನ್ನು ಬಾಯಿಗೂಡಿಸುವದರಿಂದ ಅಖೈರ ಅಢಾವೆಗೂ ಬಾಯಿಗೂಡಿಸಬೇಕು. ಅಂದರೆ ಜಮಾಖರ್ಚು ಲೆಕ್ಕದಿಂದ ಸರಿಯಾದಂತಾಯಿತು. ಅಢಾವೆಯು ಬಾಯಿಗೂಡದಿದ್ದರೆ ಜಮಾಖರ್ಚಿನಲ್ಲಿ ತಪ್ಪಿರಲಿಕ್ಕೇಬೇಕೆಂದು ತಿಳಿಯಬೇಕು. ಈ ತಪ್ಪುಗಳ ತಿದ್ದುವಿಕೆಯನ್ನು ಮುಂದಿನ ಪ್ರಕರಣದಲ್ಲಿ ಹೇಳಿದೆ.

ಉದಾ:—(೭) ಭಾಂಡವಲ ಖಾತೆ.

ಖತಾವಣಿ

ಭಾಂಡವಲ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೭೦೦ ಕೀ. ಪಾ. ೧ ತಾ. ೧—೧—೪೫ | | | |

ಇಲ್ಲಿ ಖರ್ಚಿನ ಕಡೆಗೆ ಏನೂ ಇಲ್ಲ. ೭೦೦ ರೂ. ಪಕ್ಕಾ ಬಾಕಿಯಾಯಿತು. ಈ ೭೦೦ ರೂ. ಭಾಂಡವಲ ಖಾತೆಗೆ ಖರ್ಚು ಬರೆದು ಅಢಾವೆಗೆ ಜಮೆ ಮಾಡಬೇಕು.

ತೋಂಡಮಿಳವಣಿ ಕೀರ್ದಿ

ತಾ. ೩೦—೪—೪೫ ಇ.

| | |
|---|---|
| ೭೦೦ ಅಢಾವೆ:— ತೋ. ಮಿ. ಬಗ್ಗೆ ಭಾಂಡವಲ ಖಾತೆಗೆ ಖರ್ಚು. ಖಾ. ಪಾ. | ೭೦೦ ಭಾಂಡವಲ ಖಾತೆ— ತೋ. ಮಿ. ಬಗ್ಗೆ ಅಢಾವೆಯ ಖಾತೆಗೆ ಜಮೆ. ಖಾ. ಪಾ. |

ಖತಾವಣಿ

ಭಾಂಡವಲ ಖಾತೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೭೦೦ ಕೀ. ಪಾ. ೧ ತಾ. ೧-೧-೪೫ ಇ. | | ೭೦೦ ಕೀ. ಪಾ. (ಬಾಕಿ) ತಾ. ೩೦-೪-೪೫ | |
| ೭೦೦ | | ೭೦೦ | |

ಅಖೈರ ಅಢಾವೆ

ತಾ. ೩೦—೪—೧೯೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೭೦೦ ಭಾಂಡವಲು | | ೬೦೦ ರಾಮಣ್ಣ ಧಾರವಾಡ | |

೪೦೦ ಬಂಗಾರ
೪೩೦ ರುಮಾಲ
೬೦ ರೋಖು

ಉದಾ:— ಮೇಲಿನ ಲಾಭಹಾನಿಯ ಖಾತೆಯನ್ನು ಬಾಯಿಗೂಡಿಸಿರಿ.

### ತೋಂಡಮಿಳವಣಿ ಕೀರ್ದಿ

ತಾ. ೩೦—೪—೧೯೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೭೯೦ ಅಢಾವೆ:— ತೋ. ಮಿ. ಬಗ್ಗೆ ಲಾಭಹಾನಿಯ ಖಾತೆಗೆ ಖರ್ಚು. ಖಾ. ಪಾ. | | ೭೯೦ ಲಾಭಹಾನಿಯ ಖಾತೆ:— ತೋ. ಮಿ. ಬಗ್ಗೆ ಅಢಾವೆಗೆ ಜಮೆ. ಖಾ. ಪಾ. | |

### ಖತಾವಣಿ

### ಲಾಭಹಾನಿಯ ಖಾತೆ

ತಾ. ೧—೩—೪೫ರಿಂದ ೩೦—೪—೪೫ ವರೆಗೆ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೧೦೫೦ ಬಂಗಾರದ ಲಾಭ | | ೪೦೦ ಪಗಾರ | |
| ೧೪೦ ರುಮಾಲ ಲಾಭ | | ೭೯೦ ಲಾಭ (ನಿವ್ವಳ) | |
| ೧೧೯೦ | | ೧೧೯೦ | |

### ಅಖೈರ ಅಢಾವೆಯ ಖಾತೆ

ತಾ. ೩೦—೪—೪೫ ಇ.

| ಜಮೆ | ರೂ. | ಖರ್ಚು | ರೂ. |
|---|---|---|---|
| ೭೦೦ ಭಾಂಡವಲು | | ೬೦೦ ರಾಮಣ್ಣ ಧಾರವಾಡ | |
| ೭೯೦ ಲಾಭ (ನಿವ್ವಳ) | | ೪೦೦ ಬಂಗಾರ | |
| | | ೪೩೦ ರುಮಾಲ | |
| | | ೬೦ ರೋಖು | |
| ೧೪೯೦ ಅಂಕೂಣ | | ೧೪೯೦ ಅಂಕೂಣ | |

## ೬ ಪ್ರಶ್ನೆಗಳು

೧ ತೋಂಡಮಿಳವಣಿ ಅಂದರೇನು? ಅದರ ಉದ್ದೇಶವೇನು?

೨ ಬಾಕಿಗಳ ರಕಮುಗಳು ಎಂಥವು? ಕಚ್ಚಾ ಮತ್ತು ಪಕ್ಕಾ ಬಾಕಿಗಳೆಂದರೇನು?

೩ ಅಢಾವೆ, ಲಾಭಹಾನಿಯ ಖಾತೆ ಅಂದರೇನು?

೪ ಲಾಭಹಾನಿಯ ಖಾತೆಯು ಎಂಥದು? ಯಾಕೆ?

೫ ಶಿಲಕು ಮಾಲಿನ ಬೆಲೆಯನ್ನು ತೊ. ಮಿ. ಯಲ್ಲಿ ಹೇಗೆ ತೆಗೆಯಬೇಕು?

೬ ಉತ್ಪನ್ನ ಖರ್ಚು ಖಾತೆ ಅಂದರೇನು? ಅದನ್ನು ಹೇಗೆ ಬರೆಯಬೇಕು?

೭ ತಾರೀಖು ೦—೨—೧೯೪೦ನೆಯ ಇ. ದಿವಸ ತಮ್ಮಣ್ಣನಾಯಕ ಇವರ ಖಾತೆಯನ್ನು ಬಾಯಿಗೂಡಿಸಿರಿ.

| | | |
|---|---|---|
| ತಾ. ೧—೨—೪೫ | ಪಗಾರಬಂದದ್ದು | ೩೦೦ ರೂ. |
| ತಾ. ೨—೨—೪೫ | ಮನೆಯ ಖರ್ಚು | ೫೦ ರೂ. |
| ತಾ. ೮—೨—೪೫ | ಸ್ವಂತ ಖರ್ಚು | ೧೫೦ ರೂ. |
| ತಾ. ೧೫—೨—೪೫ | ಹೊಲದ ತೆರಿಗೆ ಕೊಟ್ಟದ್ದು | ೧೦೦ ರೂ. |
| ತಾ. ೨೦—೦—೪೫ | ಲಾವಣಿ ಬಂದದ್ದು | ೩೩೦ ರೂ. |

೮ ತಾ. ೬—೩—೪೫ ಇ. ದಿವಸ ಬಂಗಾರದ ಖಾತೆಯನ್ನು ಬಾಯಿಗೂಡಿಸಿರಿ ಕಡೆಯ ದಿವಸ ಬಂಗಾರದ ದರವು ೧ ತೊಲೆಗೆ ೫೦ ರೂ. ಯಂತೆ ಇರುವದು.

ತಾ. ೧-೧-೪೫ ಇ. ಬಂಗಾರ ತೊಲೆ ೫೦೦ ದರ ೫೦ ರೂ. ಪ್ರ. ಹಿಂದಿನ ಶಿಲಕು.
ತಾ. ೧-೧-೪೫ ಇ. ,, ,, ೫೦ ದರ ೫೨ ರೂ. ಪ್ರ. ರೋಖು ಮಾರಿದನು.
ತಾ. ೨೦-೧-೪೫ ಇ. ,, ,, ೧೨೫ ದರ ೫೩ ರೂ. ಪ್ರ. ,,

೯ ಕೆಳಗೆ ಕೊಟ್ಟ ಖಾತೆಗಳನ್ನು ಬಾಯಿಗೂಡಿಸಿ ಕೀರ್ದಿ ಬರೆಯಿರಿ.

### ೧ ರಾಮರಾಯರ ಖಾತೆ

| ಜಮೆ ———— ರೂ | ಖರ್ಚು ———— ರೂ. |
|---|---|
| ೧೫ ಕೀ. ಪಾ. ೩೨ ತಾ. ೩—೪ | ೬೦ ಕೀ. ಪಾ. ೨೦ ತಾ. ೧೫—೩ |
| ೭೮ ಕೀ. ಪಾ. ೧೦೦ ತಾ. ೯—೧೦ | ೧೫೦ ಕೀ. ಪಾ. ೯೦ ತಾ. ೧೯—೯ |

### ೨ ಸಾದಿಲವಾರ ಖಾತೆ

| ಜಮೆ ———— ರೂ. | ಖರ್ಚು ———— ರೂ. |
|---|---|
| | ೨ ಕೀ. ಪಾ. ೫ ತಾ. ೩—೧ |
| | ೧ ಕೀ. ಪಾ. ೫೦ ತಾ. ೮—೮ |
| | ೨ ಕೀ. ಪಾ. ೧೦೦ ತಾ. ೨೧—೧೨ |

# ಅಭ್ಯಾಸದ ಪ್ರಶ್ನಗಳು

## ೧

೧ ಒಂದು ರೂಪಾಯಿಗೆ ೪ ಸೇರುಗಳಂತೆ ೫ ರೂ. ಗಳ ಅಕ್ಕಿಯನ್ನು ಕೊಂಡಿತು. ಈ ವ್ಯವಹಾರದಲ್ಲಿಯ ಪರಿಣಾಮ, ರಕಮು, ಖಾತೆ, ತಪಶೀಲುಗಳನ್ನು ಹೇಳಿರಿ.

೨ ಅಪ್ಪಯ್ಯ ಪಟ್ಟಣಶೆಟ್ಟಿಯು ಇಂದು ಕೆಳಗೆ ಬರೆದ ವ್ಯವಹಾರಗಳನ್ನು ಮಾಡಿದನು. ರೋಜಕೀರ್ದಿಯನ್ನು ಬರೆಯಿರಿ.

ಆರಂಭದ ಶಿಲಕು ೧ ರೂ. ೪ ಆ.
ಎರಡು ಆಣೆಗೆ ಒಂದು ಸೇರಿನಂತೆ ೪ ಆ. ಚುರಮುರಿ ಕೊಂಡನು.
ಹತ್ತು ಆಣೆಗೆ ಒಂದು ಸೇರಿನಂತೆ ೨ ಆ. ಫುಠಾಣಿ ಕೊಂಡನು.
ಮೂರು ಆಣೆಗೆ ಒಂದು ಸೇರಿನಂತೆ ಚುರಮುರಿ ಮಾರಿದನು.
೧೨ ಆಣೆಗೆ ಒಂದು ಸೇರಿನಂತೆ ಫುಠಾಣಿ ಮಾರಿದನು.

## ೨

೧ ಮುಂದೆ ಕೊಟ್ಟ ಖಾತೆಗಳ ಆವಶ್ಯಕತೆಯನ್ನು ಹೇಳಿರಿ.
ಜಮೀಖಾತೆ, ಸಾದಿಲವಾರಖಾತೆ, ಇತರ ಖರ್ಚಿನ ಖಾತೆ, ಕಿರುಕೋಳಖಾತೆ
೨ ಕೆಳಗೆ ಕೊಟ್ಟ ಖಾತೆಯ ತೋಂಡಮಿಳವಣಿ ಮಾಡಿರಿ.

ಶ್ರೀ. ಎಲ್ಲಪ್ಪ ರಾಮಪ್ಪ ಗರಗ ಖಾ. ಪಾ.

| ಜಮೆ: | ರೂ. | ಖರ್ಚು | ರೂ. |
|---|---|---|---|
| ೬ ಕೀ. ಪಾ. ೫೦ ತಾ. | ೧-೧-೪೫ | ೫ ಕೀ. ಪಾ. ೨ ತಾ. | ೨-೧-೪೫ |
| ೧ ಕೀ. ಪಾ. ೧೦೦ ತಾ. | ೧-೧೨-೪೫ | ೪ ಕೀ. ಪಾ. ೮೦ ತಾ. | ೧-೯-೪೫ |

೩ ಮುಂದೆ ಕೊಟ್ಟ ವ್ಯವಹಾರಗಳನ್ನು ಶಿಲಾರೆ ಮಹಾದೇವನ ಜೈಶೀಕೀರ್ದಿಯಲ್ಲಿ ಬರೆಯಿರಿ.

ತಾ. ೧ ಆರಂಭದ ಶಿಲಕು ೦—೮—೬
ತಾ. ೮ ಕಾಗದ ಕೊಂಡಿತು ೦—೧—೬
ತಾ. ೮ ಅಕ್ಕ ಕೊಟ್ಟಳು ೦—೬—೦
ತಾ ೧೫ ಝೂಲಾ ಸಿನೇಮಾಕ್ಕೆ ಹೋದ ಖರ್ಚು ೦—೩—೦
ತಾ. ೨೫ ರಬ್ಬರ ಕೊಂಡನು ೦—೬—೦

## ೩

೧ ಕೆಳಗೆ ಬರೆದ ಖಾತೆಗಳಿಗೆ ಒಂದೊಂದು ಉದಾಹರಣೆ ಹೇಳಿರಿ. ಕಿರುಕೋಳ, ಇತರ ಉತ್ಪನ್ನ, ಪಗಾರ, ಧರ್ಮಾದಾಯ.

೨ ಮುಂದೆ ಕೊಟ್ಟ ಸಂಗತಿಗಳಿಂದ ಬಾಳಗಿ ಸಿದ್ದಪ್ಪನ ಭಾಂಡವಲ ಖಾತೆಯನ್ನು ತಯಾರಿಸಿರಿ. ೧೦೦ ರೊಕ್ಕ ಶಿಲಕು, ೫೦ ರೂ. ಮಾಲು ಶಿಲಕು ೭೫ ರೂ. ಬ್ಯಾಂಕಿನಲ್ಲಿ ಶಿಲಕು, ೫೦ ರೂ. ಬರತಕ್ಕದ್ದು, ೧೭೫ ರೂ. ಕೊಡತಕ್ಕದ್ದು ಇದೆ.

೩ ಕೆಳಗಿನ ವ್ಯವಹಾರಗಳನ್ನು ಬರಿಗಾಲ ಮಲ್ಲಪ್ಪನ ಖತಾಣವಹಿಯಲ್ಲಿ ಬರೆಯಿರಿ.

(ಅ) ರಾಣೇಬೆನ್ನೂರು ರಾಮಪ್ಪನಲ್ಲಿ ೨ ತೊಲೆ ಬಂಗಾರ ದರ ೫೦ ರೂ. ಪ್ರಕಾರ ಉದ್ರಿ ಕೊಂಡರು.

(ಆ) ಕಡಕೋಳ ವೆಂಕಣ್ಣನಿಗೆ ಒಂದು ತೊಲೆ ಬಂಗಾರ ದರ ೫೫ ರೂ. ಪ್ರಕಾರ ಮಾರಿದೆ.

## ೪

೧ ನಿಮ್ಮ ಶಾಲೆಯ ಅಂಗಡಿಯ ಕೀರ್ದಿಯಲ್ಲಿ ಕೆಳಗಿನ ವ್ಯವಹಾರಗಳನು ಯಾವ ಯಾವ ಖಾತೆಗಳಿಗೆ ಹರಿಸುವಿರಿ?

(ಅ) ಟಾಕಿನ ಕುಡಿಗಳು ೧೦ ದರ ೨ ದು. ಒಂದರಂತೆ ಮಾರಾಟ.
(ಆ) ಬಣ್ಣದ ಕಾಗದ ೪ ದರ ೧ ಆಣೆಗೆ ಒಂದು ಮಾರಾಟ.
(ಇ) ರಬ್ಬರು ೫ ದರ ೨ ದು. ಗೆ ಒಂದು ಖರೀದಿ.
(ಈ) ದಾರದ ಬಂಡಲುಗಳು ೩ ದರ ೫ ದು. ಗೆ ಒಂದು ಖರೀದಿ.

೨ ಅನ ಅಂಗಡಿಯಲ್ಲಿಯ ಬನ ಖಾತೆಯನ್ನು ಕೊಟ್ಟಿದೆ. ಇದರ ಆಧಾರದಿಂದ ಬನ ಅಂಗಡಿಯೊಳಗಿನ ಅನ ಖಾತೆಯನ್ನು ತಯಾರಮಾಡಿರಿ.

| ಜಮೆ ——— ರೂ. | ಖರ್ಚು ——— ರೂ. |
|---|---|
| ೨೦ ಕೀ. ಪಾ. ೧೨ ತಾ. ೪—೨ | ೪ ಕೀ. ಪಾ. ೨೦ ತಾ. ೮—೨ |
| ೫ ಕೀ ಪಾ. ೪೨ ತಾ. ೫—೬ | ೬ ಕೀ. ಪಾ. ೭೫ ತಾ. ೧೧—೭ |
| ೬ ಕೀ. ಪಾ. ೧೦೦ ತಾ. ೯—೧೨ | ೩ ಕೀ. ಪಾ. ೭೫ ತಾ. ೧೧—೧೧ |

೩ ಕೆಳಗೆ ಕೊಟ್ಟವು ಖರ್ಚಿನ ರಕಮುಗಳಲ್ಲಿ ಕಚ್ಚಾಬಾಕಿ, ಪಕ್ಕಾಬಾಕಿ, ಯಾವವು?

ಶಂಕರ ನವಲಗುಂದ ೩ ರೂ. ಇತರ ಖರ್ಚು, ೧ ರೂ. ಜವಳಿ, ೧೦ ರೂ.
ಕೆನರಾ ಬ್ಯಾಂಕ ೩ ರೂ. ಸಾದಿಲವಾರ ೨ ರೂ. ಧರ್ಮಾದಾಯ ೧ ರೂ.

## ೫

೧. ಕೆಳಗಿನ ವ್ಯವಹಾರಗಳನ್ನು ಯಾವ ಯಾವ ಖಾತೆಗಳಿಗೆ ಜಮಾಖರ್ಚು ಮಾಡಬೇಕು? ಯಾಕೆ?

(ಅ) ೨೫೦ ರೂಪಾಯಿ ಕೊಟ್ಟು ಎರಡು ಖಿಲಾರಿ ಎತ್ತುಗಳನ್ನು ಕೊಂಡಿದೆ.

(ಆ) ೧೦೦೦ ರೂಪಾಯಿ ನಾವು ಈಗ ಇದ್ದ ಮನೆಯ ಅರ್ಧ ಭಾಗವನ್ನು ಜವಳಿ ರಾಮಪ್ಪನಿಗೆ ರೋಖ ಮಾರಿದೆವು.

(ಇ) ೧೦ ರೂಪಾಯಿ ಕೊಟ್ಟು ಗ್ರಾಮಫೋನ ದುರಸ್ತಿ ಮಾಡಿಸಿದೆ.

(ಈ) ಶುಕ್ರವಾರ ಲಕ್ಷ್ಮೀಪೂಜೆ ಮಾಡಲು ಪುರಾಣಿಕರಿಗೆ ೪ ಆಣೆ ಕೊಟ್ಟಿತು.

(ಉ) ವಾರದ ಮನೆಯ ಹುಡುಗನಿಗೆ ೫ ಆಣೆಯ ಪುಸ್ತಕ ಕೊಡಿಸಿದೆನು.

೨ ಅಂಗಡಿಕಾರರು ಇಡುವ ಜಮಾಖರ್ಚಿನ ಪುಸ್ತಕಗಳ ಹೆಸರುಗಳನ್ನೂ ಅವುಗಳ ಉಪಯೋಗವನ್ನೂ ಬರೆಯಿರಿ.

೩ ಕಾರ್ತಿಕ ಮಾಸದಲ್ಲಿ ಕೆಳಗೆ ಕೊಟ್ಟಂತೆ ನಡೆದ ವ್ಯವಹಾರಗಳ ಬೈಠೀಕೀರ್ದಿಯನ್ನು ಬರೆದು ಶಿಲಕು ತೆಗೆಯಿರಿ.

೧ ಆರಂಭದ ಶಿಲಕು ೪೦ ರೂ. ಕೆನರಾ ಬ್ಯಾಂಕಿನಲ್ಲಿ ೧೬೦ ರೂ. ಕಾ. ಶು. ೧

೨ ಸೀದಾ ಅಂಗಡಿಯಲ್ಲಿ ಧಾನ್ಯ ಹಾಗು ಸಕ್ಕರಿಗಳ ರೋಖ ಖರೀದಿ ೮ ರೂಪಾಯಿ ಕಾರ್ತಿಕ ಶುದ್ಧ ೨

೩ ಅಸುಲಾಲ ಮಾರವಾಡಿಯಲ್ಲಿ ೮ ಆಣೆ ೯ ಪೈಗೆ ಒಂದು ವಾರಿನಂತೆ ೪ ವಾರ ಅರಿವೆ ಉದ್ರಿ ಕೊಂಡಿತು. ಕಾರ್ತಿಕ ಶುದ್ಧ ೧೦

೪ ಬೆತ್ತದ ಖುರ್ಚಿ ೫ ರೂಪಾಯಿಗೆ ಕೊಂಡಿತು. ಕಾರ್ತಿಕ ಶುದ್ಧ ೧೫

೫ ಸೀದಾ ಅಂಗಡಿಯಲ್ಲಿ ಧಾನ್ಯ ಹಾಗು ಸಕ್ಕರಿಗಳ ರೋಖ ಖರೀದಿ ೮ ರೂಪಾಯಿ ಕಾರ್ತಿಕ ವದ್ಯ ೧

೬ ಐದು ವರ್ಷಗಳ ಹಿಂದೆ ೮ ರೂಪಾಯಿ ೧೩ ಆಣೆ ಕೊಟ್ಟು ಕೊಂಡ ಕ್ಯಾಶ ಸರ್ಟಿಫಿಕೇಟಿನ ಮುದ್ದತು ಮುಗಿದದ್ದರಿಂದ ಮುರಿಸಿ ೧೦ ರೂಪಾಯಿ ಬಂದಿತು. ಕಾರ್ತಿಕ ವದ್ಯ ೧೪

## ೬

೧ ಕೆಳಗೆ ಬರೆದ ಮಾತುಗಳಿಗೆ ಕಾರಣಗಳನ್ನು ಹೇಳಿ ಸ್ಪಷ್ಟಮಾಡಿರಿ.

೧ ಖತಾವಣಿಯು ಕೀರ್ದಿಯ ಸಂಕ್ಷಿಪ್ತ ಸ್ವರೂಪವು.

೨ ಪ್ರತಿದಿವಸದ ಕೊನೆಯ ಶಿಲಕು ನಮ್ಮ ಕಡೆಗೇ ಇರುತ್ತಿದ್ದರೂ ಖರ್ಚಿನ ಕಡೆಗೆ ಬರೆಯಬೇಕಾಗುವದು.

೩ ಕೀರ್ದಿಯ ಕೊನೆಯಲ್ಲಿ ತೋಂಡಮಿಳವಣಿಯನ್ನೂ ಖತಾವಣಿಯನ್ನೂ ಅಥಾವೆಯನ್ನೂ ಮಾಡಬೇಕು.

ಉ ಕೆಲವರು ಜೀನಸುವಾರ ಖಾತೆಗಳನ್ನು ಇಡುವದಿಲ್ಲ. ಯಾಕೆ?

೨ ಮನೆಯ ಜಮಾಖರ್ಚಿನಲ್ಲಿ ಉತ್ಪನ್ನದ ಮತ್ತು ಖರ್ಚಿನ ಸಲುವಾಗಿ ಯಾವ ಯಾವ ಖಾತೆಗಳನ್ನು ಅಗತ್ಯವಾಗಿ ಇಡಬೇಕಾಗುವದು.

೩ ಕೆಳಗಿನ ವ್ಯವಹಾರಗಳನ್ನು ಮಾಡಿ ಬಸಪ್ಪನ ಬೈಠಿ ಕೀರ್ದಿಯನ್ನು ಬರೆದು ಶಿಲಕು ತೆಗೆಯಿರಿ:— ೧೫೦ ರೂ ಜಾನೇವಾರಿ ತಿಂಗಳ ಪಗಾರ ಬಂದಿತು. ೧ ಆ. ಟಿಕೀಟಿಗೆ ಖರ್ಚಾಯಿತು. ತಾ. ೧-೨-೪೫ ೩ ರೂ, ಗಳ ಜೋಳ, ೨ ರೂ. ಗಳ ಅಕ್ಕಿ, ರೇಶನ್ ಅಂಗಡಿಯಲ್ಲಿ ತಂದಿದೆ. ತಾ ೨-೨-೪೫ ೧ ರೂ ಹಾಲು; ೨ ರೂ. ಡಾಕ್ಟರರ ಫೀ; ೩ ಆ ಸಿನೇಮಾ ನೋಡಲಿಕ್ಕೆ; ೮ ಆ. ಮಗನ ಶಾಲೆಯ ಫೀ; ೪ ಆಣೆ ಹಜಾಮನಿಗೆ ಕೊಟ್ಟಿತು ತಾ. ೫-೨-೪೫ ೬ ಬಾಟಲಿ ಕಲ್ಲೆಣ್ಣೆ (೧ ಬಾಟಲಿಗೆ ೩॥ ಆಣೆ ಪ್ರಕಾರ) ೧ ಜೋಡ ಧೋತರ (ದರ ೧೦ ರೂ. ೮ ಆಣೆ ೧ ಜೋಡಿಗೆ) ಕೊಂಡಿತು ತಾ. ೧೫-೨-೪೫ ಆನಂದಪ್ಪನಿಂದ ಬರತಕ್ಕ ಹಣದಲ್ಲಿ ೪ ರೂ. ತಿರುಗಿ ಬಂದವು. ತಾ. ೨೦-೨-೪೫ ನಿಂಗಪ್ಪ ರೈತನು ಕೊಡತಕ್ಕ ೨೦೦ ರೂ. ಲಾವಣಿಯ ಹಣದಲ್ಲಿ ಸರಕಾರಿ ತೆರಿಗೆಯನ್ನು ಕೊಟ್ಟ ಬಗ್ಗೆ ೩೦ ರೂ. ಗಳ ಪಾವತಿಯನ್ನೂ ೩೬ ರೂ. ಬೆಲೆಯ ತೊಗರೀಬೇಳೆಯನ್ನೂ ಉಳಿದ ರೋಖ ಹಣವನ್ನೂ ತಂದುಕೊಟ್ಟನು. ತಾ. ೨೫-೨-೪೫

೭

೧ ಕೆಳಗಿನ ಮಾತುಗಳಿಗೆ ಸ್ವಲ್ಪದರಲ್ಲಿ ಉತ್ತರ ಬರೆಯಿರಿ.

ಅ ಉದ್ರಿಯಿಂದ ಕೊಟ್ಟ ಸರಕು ತಿರುಗಿ ಬಂದರೆ ಅದರ ಜಮಾಖರ್ಚನ್ನು ಹೇಗೆ ಮಾಡಬೇಕು?

ಆ ಕೀರ್ದಿಯೊಳಗಿನ ರಕಮನ್ನು ಖಾತೆಗೆ ಏರಿಸದೇ ಇದ್ದ ತಪ್ಪು ಯಾವಾಗ ತಿಳಿಯುವದು?

ಇ ಮನೆಯ ಜಮಾಖರ್ಚಿನಲ್ಲಿ ಇತರ ಉತ್ಪನ್ನ ಖಾತೆಯನ್ನು ಯಾಕೆ ಇಡಬೇಕು?

ಈ ಜೋಡಮೇಳವಣಿ ಮಾಡದಿದ್ದರೆ ನಡೆಯುವದಿಲ್ಲವೇ?

೨ ಕೀರ್ದಿಯೊಳಗಿನ ಶಿಲಕು ಮತ್ತು ರೋಖ ಶಿಲಕು ಇವೆರಡು ಸರಿ ಬಂದರೆ ಆ ದಿವಸದ ಜಮಾಖರ್ಚು ಸರಿಯಾಗಿ ಬರೆದಿದೆಯೆಂದು ಹೇಳಲಿಕ್ಕೆ ಬರುವದಿಲ್ಲ. ಈ ಮಾತನ್ನು ಉದಾಹರಣೆಗಳಿಂದ ಸ್ಪಷ್ಟ ಮಾಡಿರಿ.

೩ ಕೆಳಗೆ ಕೊಟ್ಟ ವ್ಯವಹಾರಗಳ ನಿಮ್ಮ ಮನೆಯ ಮಾರ್ಗಶೀರ್ಷದ ಬೈಠೀ ಕೀರ್ದಿಯನ್ನು ಬರೆದು ಶಿಲಕು ತೆಗೆಯಿರಿ.

೧ ಆರಂಭದ ಶಿಲಕ ೩೪ ರೂ. ೧೦ ಆ. ಮಾ. ಶು. ೧

೨ ಹೊಲದ ಲಾವಣಿ ೧೨ ರೂ. ಬಂತು; ೧೨ ರೂ. ತೆರಿಗೆ ಕೊಟ್ಟೆವು. ಮಾ. ಶು. ೭

೩ ಮನೆ ಬಾಡಿಗೆ ೨ ರೂ ೮ ಆಣೆ ಕೊಟ್ಟೆವು. ಮಾ. ಶು ೮

೪ ರೇಶನ್ ಅಂಗಡಿ ಜೋಳ, ಅಕ್ಕಿ, ಸಕ್ಕರೆ ಕೂಡಿ ೫ ರೂ. ೮ ಆ. ರೊಕ್ಕ ಖರ್ಚು. ಮಾ. ಶು. ೯

೫ ಶಿವಪ್ಪ ಕೋಟೂರ ಇವರಲ್ಲಿ ೧೫ ರೂ ಗಳಿಗೆ ಹತ್ತಲ ಉದ್ರೀ ತಂದಿತು. ಮಾ. ಶು. ೧೪

೬ ಸತ್ಯನಾರಾಯಣ ಮಾಡಿದ ಖರ್ಚು ೫ ರೂ ಬಂದಿತು. ಮಾ ಶು. ೧೫

೭ ಕಿರಾಣಿ ಜೀನಸು ೭ ರೂ. ೨ ಆಣೆ ರೊಕ್ಕ ತಂದಿತು. ಮಾ. ವ. ೪

೮ ರೇಶನ್ ಅಂಗಡಿ ಜೋಳ, ಅಕ್ಕಿ ಸಕ್ಕರೆ ೫ ರೂ. ೮ ಆಣೆ ರೊಕ್ಕ ಖರ್ಚು. ಮಾ ವ. ೯

೯ ಒಡಕ ಡಬ್ಬಿ ಮೊದಲಾದವನ್ನು ಮಾರಲು ೩ ರೂ. ಬಂದವು. ಮಾ. ವ. ೧೪

೧೦ ಬಡ್ಡಿ ಬಂದಿತು. ಮಾ ವ ೩೦

ಪ್ರ.

೧ ಕೆಳಗೆ ಬರೆದ ತಪ್ಪುಗಳು ಯಾವಾಗ ಕಾಣು ಬರುವವು.

ಅ ಆರಂಭದ ಶಿಲಕು ೫೦೦ ಇದ್ದದ್ದು ಶುದ್ಧ ಖಾತೆಗೆ ಜಮೆ ಹಿಡಿದಿದೆ.

ಆ ೫ ರೂ. ಡಾಕ್ಟರರಿಗೆ ಕೊಟ್ಟ ಫೀ ಹಣವನ್ನು ಡಾಕ್ಟರರ ಹೆಸರಿನಿಂದ ಖರ್ಚು ಬರೆದಿದೆ.

೩ ಅಂಗಡಿಕಾರರು ಬೆಲೆ ಪಟ್ಟಿಯನ್ನು [ಬಿಲ್] ಕೊಡುವಾಗ ಯಾವ ಯಾವ ಸಂಗತಿಗಳನ್ನು ಲಕ್ಷದಲ್ಲಿಡಬೇಕು

೪ ಕೆಳಗಿನ ವ್ಯವಹಾರಗಳಿಂದ ನಿಮ್ಮ ಮನೆಯ ಈ ದಿನದ ಒಂದು ರೊಕ್ಕ ಕೀರ್ದಿಯನ್ನು ಬರೆಯಿರಿ. ಆರಂಭದ ಶಿಲಕು ೪೨೫ ರೂ.

ಅ ಭೀಮರಾವ ಸರಾಫರಿಗೆ ೬೦೦ ರೂ. ಗಳಿಗೆ ೫ ಎತ್ತುಗಳನ್ನು ಮಾರಿತು. ಅವರು ೪೬೦ ರೂ ರೊಕ್ಕ ಕೊಟ್ಟರು.

ಬ ೬೦೦ ರೂ ಹೊಲದ ಲಾವಣಿ ಬಂದವು.

ಕ ಮಗನ ಪರೀಕ್ಷೆ ಪಾಸಾದ್ದರಿಂದ ೫ ರೂ ಗಳ ಪೇಡೆಯನ್ನು ಹಂಚಿದೆವು.

ಡ ಸಾರ್ವಜನಿಕ ಬಾವಿಯ ಬಗ್ಗೆ ೨೦ ರೂ ವರ್ಗಣಿಯನ್ನು ಕೊಟ್ಟೆವು.

ಇ ಸಂಗಪ್ಪ ಎಲಿಗಾರ ಇವರಲ್ಲಿ ೧೬ ಪೆಂಟಿ ಬೆಲ್ಲ ತೂಕ ಒಟ್ಟು ೨೪ ಮಣ ದರ ೩೬ ರೂ ಗಳಿಗೆ ಮಣಗಳಂತೆ ಕೊಂಡೆವು.

# ಐದನೆಯ ಪ್ರಕರಣ

## ಜಮಾಖರ್ಚಿನ ತಾಳೆಗಳು.

೧. ಮೂರು ತಾಳೆಗಳು:—(೧) ರೋಖು ಶಿಲಕು ಕಿರ್ದಿಯಲ್ಲಿ ತೆಗೆದ ಶಿಲುಕು (೨) (ಅ) ಕೀರ್ದಿಯು ಎಲ್ಲ ಜಮೆಯ ಅಥವಾ ಖರ್ಚಿನ ರಕಮುಗಳು—ಖತಾವಣಿಯ ಎಲ್ಲ ಜಮೆಯ ರಕಮುಗಳು ಅಥವಾ ಖರ್ಚಿನ ರಕಮುಗಳು+ರೋಖು ಶಿಲಕು. (ಬ) ಖತಾವಣಿಯಲ್ಲಿ ಎಲ್ಲ ಜಮೆಯ ರಕಮುಗಳು=ಖರ್ಚಿನ ಎಲ್ಲ ರಕಮುಗಳು+ ರೋಖು ಶಿಲಕು. (೩) ಖತಾವಣಿಯಲ್ಲಿ ಎಲ್ಲ ಜಮೆಯ ಬಾಕಿಗಳು = ಖರ್ಚಿನ ಬಾಕಿಗಳು + ರೋಖು ಶಿಲಕು ೨. ಮೊದಲನೆಯ ತಾಳೆ:–(೧) ತಪ್ಪು ಬೇರೀಜು, (೨) ತಪ್ಪು ಜಮಾಖರ್ಚು (೩) ತಪ್ಪು ರಕಮನ್ನು ಬರೆಯುವದು. ೩. ಎರಡನೆಯ ತಾಳೆ: ಬೇರೀಜುಗಳು ೪. ತಪ್ಪುಗಳೂ ಅವುಗಳ ತಿದ್ದುವಿಕೆಯೂ. ೫. ಮೂರನೆಯ ತಾಳೆ: ಬಾಕಿಗಳ ತಾಳೆ. ೬. ಬಾಕಿಗಳ ತಾಳೆಯ ತಪ್ಪು ತಿದ್ದುವಿಕೆಯು. ೭. ಪ್ರಶ್ನೆಗಳು

ಒಂದು ನಿಯಮಿತ ಅವಧಿಯಲ್ಲಿ ಬರೆದ ಜಮಾಖರ್ಚು ಸರಿಯಾಗಿ ಇದೆಯೋ ಇಲ್ಲವೋ ಎಂಬದನ್ನು ಪರೀಕ್ಷಿಸುವ ಇಲ್ಲವೆ ಮೇಳು ನೋಡುವ ಪ್ರಕಾರಗಳಿಗೆ ತಾಳೆಗಳೆನ್ನುವರು. ತಾಳೆಗಳಿಂದ ಜಮಾಖರ್ಚಿನ ತಪ್ಪು ಒಪ್ಪುಗಳು ತಿಳಿಯುವದರಿಂದ ಜಮಾಖರ್ಚನ್ನು ಬರೆದವರ ಪ್ರಾಮಾಣಿಕತನವು ಸಿದ್ಧವಾಗುವದು. ಹೀಗೆ ತಾಳೆನೋಡುವದು ಅತ್ಯವಶ್ಯದ ಕೆಲಸವಾಗಿದೆ.

೧. ಮೂರು ತಾಳೆಗಳು:—ಅಢಾವೆಯನ್ನು ತೆಗೆಯುವದಕ್ಕಿಂತಲೂ ಮೊದಲು ಬರೆದ ಜಮಾಖರ್ಚಿನಲ್ಲಿ ತಪ್ಪಿಲ್ಲನೆಂದು ಗೊತ್ತುಮಾಡಲಿಕ್ಕೆ ಮುಖ್ಯವಾಗಿ ಮೂರು ತಾಳೆಗಳಿರುವವು.

(೧) ರೋಖು ಶಿಲಕು=ಕಿರ್ದಿಯಲ್ಲಿ ತೆಗೆದ ಶಿಲಕು.

(೨) (ಅ) ಕಿರ್ದಿಯ ಎಲ್ಲ ಜಮೆಯ ಅಥವಾ ಖರ್ಚಿನ ರಕಮುಗಳು=ಖತಾವಣಿಯ ಎಲ್ಲ ಜಮೆಯ ರಕಮುಗಳು ಅಥವಾ ಖರ್ಚಿನ ರಕಮುಗಳು+ ರೋಖು ಶಿಲಕು.

(ಬ) ಖತಾವಣಿಯಲ್ಲಿ ಎಲ್ಲ ಜಮೆಯ ರಕಮುಗಳು ಖರ್ಚಿನ ಎಲ್ಲ ರಕಮು+ರೋಖು ಶಿಲಕು.

(೩) ಖತಾವಣಿಯಲ್ಲಿ ಎಲ್ಲ ಜಮೆಯ ಬಾಕಿಗಳು=ಎಲ್ಲ ಖರ್ಚಿನ ಬಾಕಿಗಳು + ರೋಖು ಶಿಲಕು.

ಇದಕ್ಕೆ ಬಾಕಿಗಳ ತಾಳೆ ಅನ್ನುವರು.

ಮೊದಲೆಯ ತಾಳೆಯಿಂದ—ನಡೆದ ಎಲ್ಲ ವ್ಯವಹಾರಗಳನ್ನು ಕಿರ್ದಿ-ಯಲ್ಲಿ ಬರೆದಿರುವೆವೆಂಬದು, ಎರಡನೆ ತಾಳೆಯಿಂದ—ಕೀರ್ದಿಯಲ್ಲಿ ಬರೆದ ಎಲ್ಲ ರಕಮುಗಳು ಖತಾವಣಿಗೆ ಏರಿದವೆಂಬದು ಗೊತ್ತಾಗುತ್ತದೆ ಮೂರನೆಯ ತಾಳೆಯಿಂದ—ಬರೆದ ಜಮಾಖರ್ಚು ಸರಿಯಾಗಿರುವದೆಂಬದು ತಿಳಿಯುವ ದಲ್ಲದೆ ಲಾಭಹಾನಿಯನ್ನೂ, ಅಥಾವೆಯನ್ನೂ ತೆಗೆಯಲಿಕ್ಕೆ ಬರತ್ತದೆ.

೨. ಮೊದಲನೆಯ ತಾಳೆಯು:—ಕೈಯಲ್ಲಿದ್ದ ರೋಖ ಶಿಲಕು ಕೀರ್ದಿಯಲ್ಲಿ ತೆಗೆದ ಶಿಲಕಿಗೆ ಸರಿಯಾದರೆ, ಆ ದಿವಸದ ರೋಖು ಜಮಾ ಖರ್ಚು ಸರಿಯಾಯಿತೆಂದು ತಿಳಿಯಬೇಕು. ಆದರೆ ಯಾವದಾದರೊಂದು ದಿನದ ಜಮಾಖರ್ಚು ಸರಿಯಿರಬೇಕಾದರೆ—(ಅ) ರೋಖು ಶಿಲಕಿಗೆ ಕೀರ್ದಿ-ಯಲ್ಲಿ ತೆಗೆದ ಶಿಲಕೂ (ಬ) ಶಿಲಕು ಉಳಿದ ಜೀನಸುಗಳಿಗೆ ಜೀನಸಿನ ಯಾದಿ ಯಲ್ಲಿಯ ಬಾಕಿಗಳೂ ಸರಿಯಿರಬೇಕು, (ಕ) ಎಲ್ಲ ಪರಭಾರೆ ರಕಮುಗಳ ಯೋಗ್ಯ ಖಾತೆಗಳಿಗೂ ಯೋಗ್ಯ ( ಜಮೆಯ ಹಾಗು ಖರ್ಚಿನ ) ಕಡೆಗೂ ಬಿದ್ದರಬೇಕು. ಹೀಗಾದರೆ ಜಮಾಖರ್ಚು ಸರಿಯಾಗಿರುವಳೆಂದು ತಿಳಿಯ ಬೇಕು. ಆದರೆ ಹಲವು ಸಾರೆ ಕೀರ್ದಿಯಲ್ಲಿ ತೆಗೆದ ಶಿಲಕಿಗೂ, ರೋಖು ಶಿಲಕಿಗೂ ಸರಿಬೀಳುವದಿಲ್ಲ. ಹೀಗಾಗಲಿಕ್ಕೆ ಮೂರು ಕಾರಣಗಳುಂಟು. ಅವಾವವೆಂದರೆ:-- (೧) ತಪ್ಪು ಬೇರೀಜು, (೨) ತಪ್ಪು ಜಮಾಖರ್ಚು (೩) ತಪ್ಪು ರಕಮನ್ನು ಬರೆಯುವದು.

(೧) ತಪ್ಪು ಬೇರೀಜು:— ಕೀರ್ದಿಯ ಶಿಲಕು ರೋಖು ಶಿಲಕಿಗಿಂತ ಹೆಚ್ಚಾಗಬೇಕಾದರೆ,— ಜಮೆಯ ಅಥವಾ ಖರ್ಚಿನ ಕಡೆಯ ಬೇರೀಜು ಯೋಗ್ಯ ಬೇರೀಜಿಗಿಂತ ಅನುಕ್ರಮವಾಗಿ ಹೆಚ್ಚು ಅಥವಾ ಕಡಿಮೆಯಾಗಿರುತ್ತದೆ. ಅದು ರೋಖು ಶಿಲಕಿಗಿಂತ ಕಡಿಮೆಯಾಗಿದ್ದರೆ, ಜಮೆಯ ಕಡೆಯ ಬೇರೀಜು ಯೋಗ್ಯ ಬೇರೀಜಿಗಿಂತ ಕಡಿಮೆಯಾಗಬಹುದು, ಇಲ್ಲವೆ ಖರ್ಚಿನ ಕಡೆಯ ಬೇರೀಜು ಯೋಗ್ಯ ಬೇರೀಜಿಗಿಂತ ಹೆಚ್ಚಾಗಿರಬಹುದು. ಯಾಕಂದರೆ, ಜಮೆಯ ಅಥವಾ ಖರ್ಚಿನ ಬೇರೀಜು ನಿಜವಾದ ಬೇರೀಜಿಗಿಂತ ಹೆಚ್ಚು ಅಥವಾ ಕಡಿಮೆಯಾದರೆ, ಕೀರ್ದಿಯಲ್ಲಿ ತೆಗೆದ ಶಿಲಕು ರೋಖು ಶಿಲಕಿಗಿಂತ ಹೆಚ್ಚಾಗುತ್ತದೆ. ಜಮೆಯ ಅಥವಾ ಖರ್ಚಿನ ಬೇರೀಜು ನಿಜವಾದ ಬೇರೀಜಿಗಿಂತ ಕಡಿಮೆ ಅಥವಾ ಹೆಚ್ಚಾದರೆ, ಕೀರ್ದಿಯ ಶಿಲಕು ರೋಖು ಶಿಲಕಿಗಿಂತ ಕಡಿಮೆಯಾಗುತ್ತದೆ. ಉದಾ:—

| ಜಮೆ | ರೂ. | ಖರ್ಚು | ರೂ. |
|---|---|---|---|
| ನಿಜವಾದ ಬೇರೀಜು | ೭೫೦ | ನಿಜವಾದ ಖರ್ಚು | ೫೦೦ |
| | | ನಿಜವಾದ ಶಿಲಕು | ೨೫೦ |
| | ೭೫೦ | | ೭೫೦ |

ಇಲ್ಲಿ ಖರ್ಚಿನ ಬೇರೀಜು ೫೦೦ ರೂ. ಇದ್ದು ಜಮೆಯ ಬೇರೀಜು ತಪ್ಪಿ ಒಮ್ಮೆ ೭೭೫ ರೂ. ಒಮ್ಮೆ ೭೨೫ ರೂ. ಆಗಿರುವದೆಂದು ತಿಳಿಯುವಾ.

∴ ೭೭೫ ರೂ. (ಬೇರೀಜು ಹೆಚ್ಚಾದಾಗ)–೫೦೦ ರೂ. (ನಿಜವಾದ ಖರ್ಚು)= ೨೭೫ ರೂ. ನಿಜವಾದ ಶಿಲಕಿಗಿಂತ (೨೭೫ರೂ.-೨೫೦ರೂ =೨೫) ೨೫ರೂ. ಹೆಚ್ಚು.

೭೨೫ ರೂ. (ಬೇರೀಜು ಕಡಿಮೆಯಾದಾಗ)—೫೦೦ ರೂ. (ನಿಜವಾದ ಖರ್ಚು) ೨೨೫ ರೂ. ನಿಜವಾದ ಶಿಲಕಿಗಿಂತ ೨೫ ರೂ. ಕಡಿಮೆ.

ಇನ್ನು ಜಮೆಯ ಬೇರೀಜು ೭೫೦ ರೂ. ಇದ್ದು ಖರ್ಚಿನ ಬೇರೀಜು ತಪ್ಪಿ ಒಮ್ಮೆ ೫೨೫ ರೂ., ಒಮ್ಮೆ ೪೭೫ ರೂ. ಆಗಿರುವದೆಂದು ತಿಳಿಯುವಾ.

∴ ೭೫೦ ರೂ.—೫೨೫ ರೂ. (ಬೇರೀಜು ಹೆಚ್ಚಾದಾಗ)=೨೨೫ ರೂ. ನಿಜವಾದ ಶಿಲಕಿಗಿಂತ ಕಡಿಮೆ.

೭೫೦ ರೂ.—೪೭೫ ರೂ. (ಬೇರೀಜು ಕಡಿಮೆಯಾದಾಗ)=೨೭೫ ರೂ. ನಿಜವಾದ ಶಿಲಕಿಗಿಂತ ಹೆಚ್ಚು.

ಆದರೆ ಒಮ್ಮೊಮ್ಮೆ ಜಮೆ ಮತ್ತು ಖರ್ಚು ಇವೆರಡೂ ಬದಿಗಳ ಬೇರೀಜುಗಳು ತಪ್ಪಾಗಿ ಬರುವದು. ಇಂಥಲ್ಲಿ ತಪ್ಪನ್ನು ಹುಡುಕುವದು ಹುಡುಗರಿಗೆ ಕಠಿಣವಾಗುವದರಿಂದ ಅದನ್ನು ಇಲ್ಲಿ ಹೇಳಿಲ್ಲ.

(೨) ತಪ್ಪು, ಜಮಾಖರ್ಚಿನ ಬೇರೀಜು ಸರಿಯಿದ್ದರೂ ಒಮ್ಮೊಮ್ಮೆ ಜಮೆಯ ರಕಮು ಖರ್ಚಿನ ಕಡೆಗೂ, ಖರ್ಚಿನ ರಕಮು ಜಮೆಯ ಕಡೆಗೂ ಬಿದ್ದಿರುತ್ತದೆ. ಈ ತಪ್ಪು ಯಾವ ಕಡೆಗೆ ಆಗಿರುವದೆಂಬದು ಕೆಳಗಿನ ನಿಯಮದಂತೆ ತಿಳಿಯುವದು. ಕೀರ್ದಿಯ ಶಿಲಕು ರೋಖು ಶಿಲಕಿಗಿಂತ ಹೆಚ್ಚು ಅಥವಾ ಕಡಿಮೆ ಇದ್ದರೆ, ಈ ಎರಡೂ ಶಿಲಕುಗಳ ವಜಾಬಾಕಿಯ ಅರ್ಧದಷ್ಟು ರಕಮು ಜಮೆ ಅಥವಾ ಖರ್ಚಿನ ಕಡೆಗೆ ತಪ್ಪಿ ಬಿದ್ದಿರುತ್ತದೆ. ಯಾಕೆಂದರೆ, ಜಮೆಯ ಅಥವಾ ಶಿಲಕಿನ ಕಡೆಗೆ ಬೀಳತಕ್ಕ ರಕಮು ಖರ್ಚಿನ ಅಥವಾ ಜಮೆಯ ಕಡೆಗೆ ಬಿದ್ದಿದ್ದರೆ ಕೀರ್ದಿಯ ಶಿಲಕು ಮತ್ತು ರೋಖು ಶಿಲಕು ಇವುಗಳ ಅಂತರವು ತಪ್ಪಿ ಬಿದ್ದ ರಕಮಿನ ಎರಡಷ್ಟಕ್ಕೆ ಸರಿ ಇರುತ್ತದೆ. ಉದಾ:—

| ಜಮೆ —— ರೂ. | ಖರ್ಚು —— ರೂ. |
|---|---|
| ೨೫ | ೪೯ |
| ೬೫ | ೨೬ |
| ೩೬ | ೨೫ |
| ೧೪ | ೪೦ ರೋಖು ಶಿಲಕು (ನಿಜವಾದದ್ದು) |
| ೧೪೦ | ೧೪೦ |

ಇಲ್ಲಿ ೨೫ ರೂ. ಖರ್ಚಿನ ಕಡೆಯ ರಕಮು ತಪ್ಪಿ ಜಮೆಯ ಕಡೆಗೆ ಬಿದ್ದಿದೆ ಎಂದು ತಿಳಿಯುವಾ. ಉದಾ:—(೧) ∴ ಕೀರ್ದಿಯನ್ನು ಹೇಗೆ ಬರೆಯಬೇಕು.

| ಜಮೆ —— ರೂ. | ಖರ್ಚು —— ರೂ. |
|---|---|
| ೨೫ | ೪೯ |
| ೬೫ | ೨೬ |
| ೩೬ | ೯೦ ರೋಖು ಶಿಲಕು (ಹೆಚ್ಚು) |
| ೧೪ | ೧೬೫ |
| ೨೫ | |
| ೧೬೫ | |

∴ ಕೀರ್ದಿಯ ಶಿಲಕು—ರೋಖ ಶಿಲಕು=(೯೦—೬೦) ೩೦ ರೂ.

=೨×೨೫ ರೂ.

=ತಪ್ಪಿ ಬಿದ್ದ ರಕಮಿನ ಎರಡರಷ್ಟು

ಇನ್ನು ೧೪ ರೂ. ಜಮೆಯ ರಕಮು ತಪ್ಪಿ ಖರ್ಚಿನ ಕಡೆಗೆ ಬಿದ್ದಿರುವದೆಂದು ತಿಳಿಯುವಾ. ಉದಾ:—(೨) ∴ ಕೀರ್ದಿಯನ್ನು ಹೇಗೆ ಬರೆಯಬೇಕು.

| ಜಮೆ———ರೂ. | ಖರ್ಚು———ರೂ. |
|---|---|
| ೨೫ | ೪೯ |
| ೪೫ | ೨೬ |
| ೫೬ | ೨೫ |
| ೧೨೬ | ೧೪ |
| | ೧೨ |
| | ೧೨೬ |

∴ ರೋಖ ಶಿಲಕು—ಕೀರ್ದಿಯ ಶಿಲಕು=(೪೦—೧೨) ೨೮

=೨×೧೪ ರೂಪಾಯಿ

=ತಪ್ಪಿ ಬಿದ್ದ ರಕಮಿನ ಎರಡರಷ್ಟು,

ಇಂಥ ತಪ್ಪುಗಳನ್ನು ತಿದ್ದಬೇಕಾದರೆ ಕೀರ್ದಿಯ ರಕಮು ರೋಖ ಶಿಲಕಿಗಿಂತ ಹೆಚ್ಚಾದರೆ ಹೆಚ್ಚಾದಷ್ಟು ರಕಮನ್ನು ಖರ್ಚಿನ ಕಡೆಗೂ, ಕಡಿಮೆಯಾದರೆ ಕಡಿಮೆಯಾದಷ್ಟು ರಕಮನ್ನು ಜಮೆಯ ಕಡೆಗೂ ಬರೆದು ತಪಶೀಲಿನಲ್ಲಿ 'ತಪ್ಪಿ ಬಿದ್ದದರಿಂದ' ಎಂದು ಬರೆಯಬೇಕು.

ಉದಾ:— ಹಿಂದಿನ ೧ನೆಯ ೨ನೆಯ ಉದಾಹರಣೆಗಳನ್ನು ತಿದ್ದುವದು.

| ೨೫ ರೂ. ಖರ್ಚಿನ ಕಡೆಗೆ ಬೀಳದೆ ಜಮೆಯ ಕಡೆಗೆ ಬಿದ್ದಾಗ್ಗೆ | | ೧೪ ರೂ. ಜಮೆಯ ರಕಮು ತಪ್ಪಿ ಖರ್ಚಿನ ಕಡೆಗೆ ಬಿದ್ದಾಗ | |
|---|---|---|---|
| ಜಮೆ———ರೂ. | ಖರ್ಚು———ರೂ. | ಜಮೆ———ರೂ. | ಖರ್ಚು———ರೂ. |
| ೨೫ | ೪೯ | ೨೫ | ೪೯ |
| ೪೫ | ೨೬ | ೪೫ | ೨೬ |
| ೫೬ | ೩೦ ತಪ್ಪಿ ಬಿದ್ದದರಿಂದ | ೫೬ | ೨೫ |
| ೧೪ | ೪೦ ನಾಳಿನ ಶಿಲಕು | ೨೮ ತಪ್ಪಿ ಬಿದ್ದದರಿಂದ | ೧೪ |
| ೨೫ | ೧೬೫ | ೧೫೪ | ೪೦ ನಾಳಿನ ಶಿಲಕು |
| ೧೬೫ | | | ೧೫೪ |

ಎರಡು ಅಥವಾ ಹೆಚ್ಚು ರಕಮುಗಳು ಯೋಗ್ಯ ಕಡೆಗೆ ಬೀಳದೆ ಇದ್ದಾಗ ಕೀರ್ದಿ ಮತ್ತು ರೋಖು ಶಿಲಕು ಇವುಗಳ ಅಂತರವು ಈ ರಕಮುಗಳ ಬೇರೀಜಿನ ಅಥವಾ ವಜಾಬಾಕಿಯು ಎರಡು ಪಟ್ಟಿಗೆ ಸರಿಯಿರುತ್ತದೆ.

**ತಪ್ಪು ರಕಮನ್ನು ಬರೆಯುವದು:—** (ಅ) ರಕಮು ಬರೆಯುವದನ್ನು ಮರೆತರೆ, (ಬ) ಆಣೆ–ಪೈಗಳು ಅದಲುಬದಲಾದರೆ, (ಕ) ರೂಪಾಯಿ–ಆಣೆಗಳು ಅದಲುಬದಲಾದರೆ, ಅಥವಾ (ಡ) ಅಂಕೆಗಳು ಹಿಂದುಮುಂದೆ ಬಿದ್ದರೆ ಕೀರ್ದಿಯ ಶಿಲಕು ರೋಖು ಶಿಲಕಿಗೆ ಸರಿ ಆಗುವದಿಲ್ಲ.

(ಅ) ರಕಮು ಬರೆಯುವದನ್ನು ಮರೆತಿದ್ದರೆ:—ಕೀರ್ದಿಯ ಶಿಲಕು ರೋಖು ಶಿಲಕು ಇವುಗಳ ವಜಾಬಾಕಿಗೆ ಮರೆತು ಬಿಟ್ಟ ರಕಮು ಸರಿ ಇರುತ್ತದೆ. ಆದುದರಿಂದ ಮೊದಲು ವಜಾಬಾಕಿಯಷ್ಟು ರಕಮು ಬರೆಯುವದನ್ನು ಮರೆತಿರುವದೋ ಹೇಗೋ ನೋಡಬೇಕು. ಮರೆತಿದ್ದರೆ ಮರೆತು ಬಿಟ್ಟ ರಕಮನ್ನು ಯೋಗ್ಯ ಕಡೆಗೆ ಬರೆದರೆ, ಕೀರ್ದಿಯ ಶಿಲಕು ರೋಖು ಶಿಲಕಿಗ ಸರಿಯಾಗುವದು.

[ಬ] ಆಣೆ-ಪೈಗಳು ಅದಲುಬದಲಾಗಿದ್ದರೆ:–ವಜಾಬಾಕಿಯು ಅದಲುಬದಲಾದ ಸಂಖ್ಯೆಗಳ ಅಂತರದ ೧೧ ಪಟ್ಟು ಪೈಗಳಿಗೆ ಸರಿ ಇರುತ್ತದೆ.

ಉದಾ:—(೧) ೭ ಆ ೩ ಪೈ ಬರೆಯುವದರ ಬದಲು, ೩ ಆ. ೭ ಪೈ ಬರೆದರೆ ೭ ಆ. ೩ ಪೈ—೩ ಆ. ೭ ಪೈ=೩ ಆ. ೮ ಪೈ=(೩೬+೮) ೪೪ ಪೈ=೪× ೧ ಪೈ.

=(೭—೩) ೧೧ ಪೈ=ಅದಲುಬದಲಾದ ಸಂಖ್ಯೆಗಳ ಅಂತರದ ೧೧ಪಟ್ಟು ಪೈಗಳು.

ಇದಕ್ಕೆ ವಿಪರೀತವಾಗಿ, ವಜಾಬಾಕಿಗೆ ೧೧ ಪೈಗಳಿಂದ ಪೂರ್ಣ ಭಾಗ ಹೋದರೆ ಆಣೆ–ಪೈಗಳು ಅದಲುಬದಲಾಗಿವೆ ಎಂದು ತಿಳಿಯಬೇಕು. ಬಂದ ಭಾಗಾಕಾರದಷ್ಟು ಅಂತರವಿರುವ ಎಲ್ಲ ಆಣೆ-ಪೈಗಳನ್ನು ನೋಡಿದರೆ ತಪ್ಪು ತಿಳಿಯುವದು.

[ಕ] ರೂಪಾಯಿ ಆಣೆಗಳು ಅದಲುಬದಲಾಗಿದ್ದರೆ:—ವಜಾಬಾಕಿಯು ಅದಲುಬದಲಾದ ಸಂಖ್ಯೆಗಳ ಅಂತರದ ೧೫ಪಟ್ಟು ಆಣೆಗಳಿಗೆ ಸರಿ ಇರುತ್ತದೆ.

ಉದಾ:—(೨] ೪ ರೂ. ೧೨ ಆ. ಗಳ ಬದಲು ೧೨ ರೂ. ೪ ಆಣೆ ಬರೆದರೆ ಅಂತರವೆಷ್ಟು? ೧೨ ರೂ. ೪ ಆ.—೪ ರೂ ೧೨ ಆ.=೭ ರೂ. ೮ ಆ =೧೨೦ ಆಣೆಗಳು.

=೮×೧೫ ಆ.=(೧೨—೪) ಆಣೆಗಳು=ಅದಲುಬದಲಾದ ಸಂಖ್ಯೆಗಳ ಅಂತರದ ೧೫ ಪಟ್ಟು ಆಣೆಗಳು.

ಇದಕ್ಕೆ ವಿಪರೀತವಾಗಿ, ವಜಾಬಾಕಿಗೆ ೧೫ ಆ. ಗಳಿಂದ ಪೂರ್ಣಭಾಗ ಹೋದರೆ ರೂ. ಆಣೆಗಳು ಅದಲುಬದಲಾಗಿವೆ ಎಂದು ತಿಳಿಯಬೇಕು. ಬಂದ ಭಾಗಾಕಾರದಷ್ಟು ಅಂತರವಿರುವ ಎಲ್ಲ ರೂ. ಆ. ಗಳನ್ನು ನೋಡಿದರೆ ತಪ್ಪು ತಿಳಿಯುವದು.

(ಡ) ರೂಪಾಯಿಗಳಲ್ಲಿ ಅಂಕೆಗಳು ಹಿಂದು ಮುಂದೆ (ಹತ್ತರ ಪಟ್ಟಿನಿಂದ ಹೆಚ್ಚು ಕಡಿಮೆ) ಆದರೆ:— ವಜಾಬಾಕಿಯು ಸಣ್ಣ ಸಂಖ್ಯೆಯ ೯ ಪಟ್ಟು ರೂ. ಗಳಿಗೆ ಸರಿ ಇರುತ್ತದೆ.

ಉದಾ:—(೩) ೧೯೫೦ ರೂ. ಗಳ ಬದಲು ೧೯೫ ರೂ. ಗಳನ್ನು ಹಿಡಿದಿದ್ದರೆ, ೧೯೫೦ ರೂ —೧೯೫ ರೂ. =೧೭೫೫ ರೂ. =೯×೧೯೫ ರೂ. ಸಣ್ಣ ಸಂಖ್ಯೆಯ ೯ ಪಟ್ಟು ರೂ. ಗಳು.

೩. ಎರಡನೆಯ ತಾಳೆಯು:— (ಅ) ಪ್ರತಿ ದಿವಸ ಸಂಜೆಗೆ ಕೀರ್ದಿಯ ಎರಡೂ ಬದಿಗಳ ಬೇರೀಜು ಸರಿಯಾಗುತ್ತವೆ. ಆದುದರಿಂದ ರೋಜಕೀರ್ದಿಯನ್ನು ಆರಂಭಮಾಡಿದಂದಿನಿಂದ ಆಥಾವೆಯನ್ನು ತೆಗೆಯುವ ವರೆಗೆ ಎಲ್ಲ ದಿವಸಗಳ ಜಮೆಯ ರಕಮುಗಳ ಬೇರೀಜುಗಳು ಖರ್ಚಿನ ರಕಮುಗಳ ಬೇರೀಜುಗಳಿಗೆ ಸರಿಯಾಗುತ್ತವೆ. ಮತ್ತು ಕೀರ್ದಿಯಲ್ಲಿ ಬರೆದ ಎಲ್ಲ ಜಮೆಯ ರಕಮುಗಳು ಖತಾವಣಿಯಲ್ಲಿ ಆಯಾ ಖಾತೆಯ ಜಮೆಯ ಕಡೆಗೆ ಏರಿದ್ದರೆ, ಖತಾವಣಿಯಲ್ಲಿಯ ಜಮೆಯ ರಕಮುಗಳ ಬೇರೀಜು ಕೀರ್ದಿಯ ಜಮೆಯ ರಕಮುಗಳ ಬೇರೀಜಿಗೆ ಸರಿ ಇರುತ್ತದೆ. ಅದರಂತೆ ಕೀರ್ದಿಯ ಖರ್ಚಿನ ರಕಮುಗಳ ಬೇರೀಜು ಖತಾವಣಿಯ ಖರ್ಚಿನ ರಕಮುಗಳ ಬೇರೀಜಿನಲ್ಲಿ ರೋಖು ಶಿಲಕನ್ನು ಕೂಡಿಸಿ ಬಂದ ಬೇರೀಜಿಗೆ ಸರಿಯಾಗುತ್ತದೆ. ಯಾಕಂದರೆ, ಪ್ರತಿ ದಿವಸದ ರೋಖು ಶಿಲಕು ಖತಾವಣಿಯಲ್ಲಿ ಯಾವ ಖಾತೆಗೂ ಏರಿರುವದಿಲ್ಲ.

(ಬ) ಖತಾವಣಿಯಲ್ಲಿಯ ಎಲ್ಲ ಜಮೆಯ ರಕಮುಗಳು=ಖರ್ಚಿನ ರಕಮುಗಳು+ರೋಖು ಶಿಲಕು.

ಕೀರ್ದಿಯ ಜಮೆಯ ಅಥವಾ ಖರ್ಚಿನ ಬೇರೀಜು=ಖತಾವಣಿಯ ಜಮೆಯ ಅಥವಾ ಖರ್ಚಿನ ಬೇರೀಜು+ರೋಖು ಶಿಲಕು. ಅದರ ಕೀರ್ದಿಯಲ್ಲಿ ಜಮೆಯ ರಕಮುಗಳು=ಖರ್ಚಿನ ರಕಮುಗಳು.

∴ ಖತಾವಣಿಯಲ್ಲಿ ಎಲ್ಲ ಜಮೆಯ ರಕಮುಗಳು=ಖತಾವಣಿಯಲ್ಲಿಯ ಎಲ್ಲ ಖರ್ಚಿನ ರಕಮುಗಳು+ರೋಖು ಶಿಲಕು.

ಆದರೆ ಒಮ್ಮೊಮ್ಮೆ ಕೀರ್ದಿಯ ಬೇರೀಜು ಖತಾವಣಿಯ ಬೇರೀಜಿಗೆ ಸರಿಯಾಗುವದಿಲ್ಲ. ಕೀರ್ದಿಯ ಬೇರೀಜು ಖತಾವಣಿಯ ಬೇರೀಜಿಗಿಂತ ಹೆಚ್ಚಾದರೆ, ಕೀರ್ದಿಯ ಒಂದು ಅಥವಾ ಹಲವು ರಕಮುಗಳು ಖತಾವಣಿಗೆ ಏರಿಲ್ಲವೆಂದೂ, ಕೀರ್ದಿಯ ಬೇರೀಜು ಖತಾವಣಿಯ ಬೇರೀಜಿಗಿಂತ ಕಡಿಮೆಯಾದರೆ, ಕೀರ್ದಿಯ ಒಂದೇ ರಕಮು ಖತಾವಣಿಯಲ್ಲಿ ಎರಡು ಅಥವಾ ಹೆಚ್ಚು ಸಾರೆ ಏರಿರಲಿಕ್ಕೆ ಬೇಕೆಂದೂ ತಿಳಿಯಬೇಕು. ಈ ತಪ್ಪನ್ನು ೨ನೆಯ ಕಲಮಿನಲ್ಲಿ ಹೇಳಿದಂತೆ ತಿದ್ದಬೇಕು.

೪. ತಪ್ಪುಗಳೂ ಅವುಗಳ ತಿದ್ದುವಿಕೆಯೂ:— ಮೊದಲನೆಯ ಮತ್ತು ಎರಡನೆಯ ತಾಳೆಗಳನ್ನು ನೋಡಿದರೂ (ನಡೆದ) ಜಮಾಖರ್ಚು ಸರಿಯಾಗಿರಲಿಕ್ಕೇ ಬೇಕೆಂದು ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ—(೧) ರೋಖು ರಕಮನ್ನು ತೆಗೆದುಕೊಂಡು ಕೀರ್ದಿಯಲ್ಲಿ ಬರೆಯದೆ ಇದ್ದರೆ (೨) ಇಸಮಿನ ಅಥವಾ ಜೀನಸಿನ ಖಾತೆಗೆ ಬೀಳತಕ್ಕ ರಕಮು ಬೇರೆ ಇಸಮಿನ ಅಥವಾ ಬಾಬಿನ ಖಾತೆಗೆ ಬಿದ್ದಿದ್ದರೆ, (೩) ರೋಖು ಮತ್ತು ಕೀರ್ದಿಯ ಶಿಲಕು ಸರಿಯಾಗುವಂತೆ ರಕಮನ್ನು ಹೆಚ್ಚು ಕಡಿಮೆ ಮಾಡಿ ಬರೆದಿದ್ದರೆ (೪) ಪರಭಾರೆ ರಕಮನ್ನು ಕೀರ್ದಿಯಲ್ಲಿ ಬರೆಯದೆ ಇದ್ದರೆ, (೫) ಪರಭಾರೆ ರಕಮನ್ನು ಹೆಚ್ಚು ಕಡಿಮೆ ಮಾಡಿ ಬರೆದಿದ್ದರೆ ಮೇಲೆ ಹೇಳಿದ ತಾಳೆಗಳು ಸರಿಯಾಗುವವು. ಆದದರಿಂದ ಈ ತಪ್ಪುಗಳು ಮೇಲಿನ ಎರಡೂ ತಾಳೆಗಳಿಂದ ತಿಳಿಯುವದಿಲ್ಲ. ಇಂಥ ತಪ್ಪುಗಳನ್ನು ಕೆಳಗೆ ಹೇಳಿದಂತೆ ತಿದ್ದಬೇಕು.

(೧) ರೋಖು ರಕಮನ್ನು ತೆಗೆದುಕೊಂಡು ಕೀರ್ದಿಯಲ್ಲಿ ಬರೆಯದೆ ಇದ್ದರೆ:—

ಮಾರಿದ ಜೀನಸಿನ ಬೆಲೆಯು ತೀರ ಸಣ್ಣದಿದ್ದು ಅದನ್ನು ತೆಗೆದುಕೊಂಡಿದ್ದರೆ ಈ ತಪ್ಪು ತಿಳಿಯುವದು ಬಹಳ ಕಠಿಣವು. ಬಹಳ ಜೀನಸನ್ನು ಹೀಗೆ ಮಾರಿದ್ದರೆ, ಜೀನಸಿನ ಯಾದಿಯಲ್ಲಿಯ ಬಾಕಿಯು ನಿಜವಾದ ಬಾಕಿಗಿಂತ ಬಹಳ ಹೆಚ್ಚಾಗುತ್ತವೆ. ಅಲ್ಲಿಂದ ಇಂಥ ತಪ್ಪುಗಳು ಗೊತ್ತಾದರೂ ದೊಡ್ಡ ಅಂಗಡಿಯಲ್ಲಿ ಈ ತಪ್ಪನ್ನು ಯಾರು ಮಾಡಿರುವರೆಂಬದು ಗೊತ್ತಾಗುವದಿಲ್ಲ.

ಹೀಗಾಗುವದು ಗೊತ್ತಾಗಬೇಕಾದರೆ, ಪ್ರತಿಯೊಂದು ವ್ಯವಹಾರಕ್ಕೆ ಯಾದಿ ಅಥವಾ ಪಾವತಿಯು ಬೇಕು. ಪ್ರತಿಯೊಂದು ಪಾವತಿಯಲ್ಲಿಯು ರಕಮನ್ನು ಯಾರಿಗೆ ಕೊಟ್ಟಿತು, ಯಾವ ಕಾರಣದಿಂದ ಕೊಟ್ಟಿತು, ಅಥವಾ ಯಾರಿಂದ ಇಸುಕೊಂಡಿತು, ಯಾವ ಕಾರಣದಿಂದ ಇಸುಕೊಂಡಿತು ಎಂಬುದನ್ನೂ ಇಸುಗೊಂಡವರ ಸಹಿಯನ್ನೂ ಕಾಣಿಸಿರಬೇಕು. ಅಂದರೆ ಈ ತರದ ಮೋಸವು ಕಡಿಮೆಯಾಗುವದು.

(೨) ಆಯಾ ಇಸಮುಗಳು ತಮ್ಮ ಬಾಕಿಯನ್ನು ತೀರಿಸುವ ಕಾಲಕ್ಕೆ ಮತ್ತು ಪ್ರತಿಯೊಂದು ಯಾದಿಯನ್ನು ಮಾಡುವ ಮುಂದೆ ಎರಡನೆಯ ತರದ ತಪ್ಪುಗಳು ತಿಳಿಯುವವು.

ಮೂರನೆಯ ತರದ ತಪ್ಪುಗಳು ಗೊತ್ತಾಗುವದು ಬಹಳ ಕಠಿಣವು. ಆದರೆ ಪಾವತಿಯನ್ನು ಇಲ್ಲವೆ ಯಾದಿಯನ್ನಿಟ್ಟರೆ ಗೊತ್ತಾಗುವವು.

ನಾಲ್ಕನೆಯ ತರದ ತಪ್ಪುಗಳು ಜೀನಸುಗಳ ಯಾದಿಯಿಂದ ಗೊತ್ತಾಗುವವು.

ಐದನೆಯ ತರದ ತಪ್ಪುಗಳು ಸೂಕ್ಷ್ಮವಾಗಿ ನೋಡದಿದ್ದರೆ ಗೊತ್ತಾಗುವದಿಲ್ಲ. ಇಲ್ಲಿ ಜೀನಸಿನ ಯಾದಿಯು ಉಪಯೋಗವಾಗುವದಿಲ್ಲ; ಯಾಕಂದರೆ ಜೀನಸಿನ ಬಾಕಿಯು, ಯಾದಿಯಲ್ಲಿಯೂ ಕೈಯಲ್ಲಿಯೂ ಒಂದೇ ಆಗಿರುತ್ತದೆ.

ಮೇಲಿನ ತಪ್ಪುಗಳನ್ನು ತಿದ್ದುವ ರೀತಿಯು ಕೆಳಗಿನ ಉದಾಹರಣೆಯಿಂದ ಸ್ಪಷ್ಟವಾಗುವದು.

ಉದಾ:—(೪) ಆಸ ಕೀರ್ದಿಯಲ್ಲಿ ತಾ. ೧—೧—೪೫ ಇ. ದಿವಸ.

೪ ರೂ. ಹೂವಪ್ಪ ಗೋದಿ ಇವನ ಖಾತೆಗೆ ಖರ್ಚು ಬೀಳದೆ ಪಗಾರ ಖಾತೆಗೆ ಖರ್ಚು ಬಿದ್ದಿದೆ.

೭೬ ರೂ. ಸೂಡಿ ಸಂಗಪ್ಪನ ಖಾತೆಗೆ ಜಮೆ ಬೀಳದೆ ವಾಲಿ ಸಂಗಪ್ಪನ ಖಾತೆಗೆ ಜಮೆ ಬಿದ್ದಿದೆ.

೫೦ ರೂ. ವಕೀಲಿ ಸಂಬಂಧ ಕೊಟ್ಟದ್ದು ಜಯರಾವ ವಕೀಲ ಇವರ ಖಾತೆಗೆ ಖರ್ಚು ಬಿದ್ದಿದೆ.

೨೫೦ ರೂ. ತಿಜೋರಿ ಕೊಂಡದ್ದು ಸಾದಿಲವಾರ ಖಾತೆಗೆ ಖರ್ಚು ಬಿದ್ದಿದೆ.

೩೦ ರೂ. ಹರಿಪಂತರು ಬಾಡಿಗೆಯನ್ನು ಕೊಟ್ಟದ್ದು ಅವರ ಖಾತೆಗೆ ಜಮೆ ಆದೆಗಿ.

ಅನ ಕೀರ್ದಿ. ಪಾ. ನಂ.

ತಾ. ೮—೧—೧೯೪೫ ಇ.

| ಜಮೆ ———————— ರೂ. | ಖರ್ಚು ———————— ರೂ. |
|---|---|
| ೪ ಪಗಾರದ ಖಾತೆ:— ತಪ್ಪಿ ಬಿದ್ದಿದ್ದರಿಂದ ಗೋದಿ ಹೂವಪ್ಪನ ಖಾತೆಗೆ ಖರ್ಚು. ಖಾ ಪಾ. | ೪ ಗೋದಿ ಹೂವಪ್ಪನ ಖಾತೆ:— ತಪ್ಪಿ ಬಿದ್ದದ್ದರಿಂದ ಪಗಾರ ಖಾತೆಗೆ ಜಮೆ. ಖಾ. ಪಾ. |
| ೭೬ ಸೂಡಿ ಸಂಗಪ್ಪನ ಖಾತೆ:— ತಪ್ಪಿ ಬಿದ್ದದ್ದರಿಂದ ವಾಲಿ ಸಂಗಪ್ಪನ ಖಾತೆಗೆ ಖರ್ಚು. ಖಾ. ಪಾ. | ೭೬ ವಾಲಿ ಸಂಗಪ್ಪನ ಖಾತೆ:— ತಪ್ಪಿ ಬಿದ್ದದ್ದರಿಂದ ಸೂಡಿ ಸಂಗಪ್ಪನ ಖಾತೆಗೆ ಜಮೆ. ಖಾ. ಪಾ. |
| ೫೦ ಜಯರಾವ ವಕೀಲರ ಖಾತೆ:— ತಪ್ಪಿ ಬಿದ್ದದ್ದರಿಂದ ವಕೀಲಿ ಖಾತೆಗೆ ಖರ್ಚು. ಖಾ. ಪಾ. | ೫೦ ವಕೀಲಿ ಖಾತೆ:— ತಪ್ಪಿ ಬಿದ್ದದ್ದರಿಂದ ಜಯರಾವ ವಕೀಲರ ಖಾತೆಗೆ ಜಮೆ. ಖಾ. ಪಾ. |
| ೨೫೦ ಸಾದಿಲವಾರ ಖಾತೆ:— ತಪ್ಪಿ ಬಿದ್ದದ್ದರಿಂದ ತಿಜೋರಿ ಖಾತೆಗೆ ಖರ್ಚು. ಖಾ. ಪಾ. | ೨೫೦ ತಿಜೋರಿ ಖಾತೆ:— ತಪ್ಪಿ ಬಿದ್ದದ್ದರಿಂದ ಸಾದಿಲವಾರ ಖಾತೆಗೆ ಜಮೆ. ಖಾ. ಪಾ. |
| ೩೦ ಬಾಡಿಗೆ ಖಾತೆ:— ತಪ್ಪಿ ಬಿದ್ದದ್ದರಿಂದ ಹರಿಪಂತರ ಖಾತೆಗೆ ಖರ್ಚು. ಖಾ. ಪಾ. | ೩೦ ಹರಿಪಂತರ ಖಾತೆ:— ತಪ್ಪಿ ಬಿದ್ದದ್ದರಿಂದ ಬಾಡಿಗೆ ಖಾತೆಗೆ ಜಮೆ. ಖಾ. ಪಾ. |
| ೪೧೦ | ೪೧೦ |

## ಲಾಭಹಾನಿಯ ಖಾತೆ

ತಾ..................ಯಿಂದ .......................ವರೆಗೆ

| ಜಮೆ | ರೂ. | ಖರ್ಚು | ರೂ. |
|---|---|---|---|
| ೪ ಪಗಾರ (ಲಾಭ) | | ೫೦ ವಕೀಲಿ (ಹಾನಿ) | |
| ೨೫೦ ಸಾದಿಲವಾರ (ಲಾಭ) | | ೨೩೪ ನಿವ್ವಳ ಲಾಭ (ಹೆಚ್ಚು) | |
| ೩೦ ಬಾಡಿಗೆ (ಲಾಭ) | | | |
| ೨೮೪ | | ೨೮೪ | |

### ೫ ಮೂರನೆಯ ತಾಳೆಯು:—

ಎರಡು ಬೇರೀಜುಗಳು ಸರಿಯಿದ್ದರೆ ಅವುಗಳ ಅಂತರಗಳು ಸರಿಇರುತ್ತವೆ.

ಉದಾ:— (೫) ೩+೭+೧೨+೧೮=೫+೮+೧೩+೧೪

∴ (೭—೫)+(೧೮—೧೪)=(೮—೩)+(೧೩—೧೨)

∴ ೨+೪=೫+೧

∴ ೬=೬

ಖತಾವಣೆಯಲ್ಲಿ, ಎಲ್ಲ ಜಮೆಯ ರಕಮುಗಳು=ಖರ್ಚಿನ ಎಲ್ಲ ರಕಮುಗಳು+ರೋಖು ಶಿಲಕು ಎಂಬುದನ್ನು ಹಿಂದೆ ಹೇಳಿದೆ.

∴ ಖತಾವಣೆಯ ಎಲ್ಲ ಜಮೆಯ ಬಾಕಿಗಳು= ಖರ್ಚಿನ ಎಲ್ಲ ಬಾಕಿಗಳು-ರೋಖು ಶಿಲಕು.

ಮೇಲಿನ ಎರಡೂ ತಾಳೆಗಳಲ್ಲಿ ತೋರಿಸಿದ ದೋಷಗಳು ಈ ತಾಳೆಯಲ್ಲಿಯೂ ಕಂಡುಬರುತ್ತವೆ. ಆದದರಿಂದ ಮೇಲೆ ಹೇಳಿದ ದೋಷಗಳು, ಬರೆದ ಜಮಾಖರ್ಚಿನಲ್ಲಿ ಇಲ್ಲೆಂಬದನ್ನು ಮೊದಲು ಗೊತ್ತುಮಾಡಿ ಆ ಮೇಲೆ ಬಾಕಿಗಳ ತಾಳೆಯನ್ನು ನೋಡಬೇಕು. ಖಾತೆಯನ್ನು ಬರೆಯುವಂತೆ ಈ ತಾಳೆಯನ್ನು ಬರೆದು ಅದರ ಜಮೆಯ ಕಡೆಗೆ ಎಲ್ಲ ಜಮೆಯ ಬಾಕಿಗಳನ್ನೂ, ಖರ್ಚಿನ ಕಡೆಗೆ ಎಲ್ಲ ಖರ್ಚಿನ ಬಾಕಿಗಳನ್ನೂ ರೋಖು ಶಿಲಕನ್ನೂ ಬರೆದರೆ ಎರಡೂ ಬದಿಗಳು ಸರಿಯಾಗಲಿಕ್ಕೆ ಬೇಕು. ಅಂದರೆ ಬರೆದ ಜಮಾಖರ್ಚು ಸರಿಯಾಗಿದೆಯೆಂದು ತಿಳಿಯಬೇಕು. ಈ ತಾಳೆಯಿಂದ ಶಿಲಕು ಮಾಲಿನ ಬೆಲೆಯು ತಿಳಿಯದೆ ಇದ್ದುದರಿಂದ ಅದರ ಬೆಲೆಯನ್ನು ಕೋಂಡ—ಮಿಳವಣಿ ಪ್ರಕರಣದಲ್ಲಿ ಹೇಳಿದಂತೆ ಮಾಡಬೇಕು. ಅದರ ಬೆಲೆಯನ್ನು ಈ ತಾಳೆಯಲ್ಲಿ ಬರೆಯಬಾರದು.

ಬಾಕಿಗಳಲ್ಲಿ ಕಚ್ಚಾ ಮತ್ತು ಪಕ್ಕಾ ಎಂದು ಎರಡು ಪ್ರಕಾರಗಳು. ಕಚ್ಚಾ ಬಾಕಿಗಳನ್ನು ಲಾಭಹಾನಿಯ ಖಾತೆಗೆ, ಪಕ್ಕಾಬಾಕಿಗಳನ್ನು ಅಥಾವೆಯ ಖಾತೆಗೆ ಎತ್ತಿದರೆ ಲಾಭಹಾನಿಯು ಖಾತೆಯೂ, ಅಥಾವೆಯೂ ಬಾಯಿಗೂಡು-ತ್ತವೆ ಎಂದು ಹಿಂದೆ ಹೇಳಿದೆಯಷ್ಟೆ. ಈ ತಾಳೆಯನ್ನು ನೋಡುವ ಕಾಲಕ್ಕೆ ತೋಂಡವಿಳವಣಿಯನ್ನು ಬರೆದರೆ, ಒಮ್ಮೊಮ್ಮೆ ಈ ತಾಳೆಯು ತಪ್ಪಿ ಕೇರ್ದ-ಖಾತೆಗಳನ್ನು ಹಲವು ಸಾರೆ ತಿದ್ದಬೇಕಾಗುವದು. ಹೀಗಾಗಬಾರದೆಂದು ಬೇರೆ ಕಾಗದದ ಮೇಲೆ ಬಾಕಿಗಳ ತಾಳೆಯನ್ನು ಮೊದಲು ಬರೆದು, ಅದರ ಮೇಲಿಂದ ಖರೀದಿ ವಿಕ್ರಿ ಖಾತೆಯನ್ನೂ ಲಾಭಹಾನಿಯ ಖಾತೆಯನ್ನೂ, ಇಲ್ಲವೆ ಉತ್ಪನ್ನ ಖರ್ಚಿನ ಖಾತೆಯನ್ನೂ ಅಥಾವೆಯನ್ನೂ ತೆಗೆಯುತ್ತಾರೆ. ಇವು ಸರಿಯಾದ ಮೇಲೆ ಎಲ್ಲ ಖಾತೆಗಳ ತೋಂಡವಿಳವಣಿಯನ್ನು ಹಿಂದಿನ ಪ್ರಕರಣದಲ್ಲಿ ತೋರಿಸಿದಂತೆ ಮಾಡಬೇಕು.

ಉದಾ;— (೧) ಕೆಳಗಿನ ಬಾಕಿಗಳ ತಾಳೆಯಿಂದ ಖರೀದಿ ವಿಕ್ರಿ ಖಾತೆ, ಲಾಭಹಾನಿಯ ಖಾತೆ, ಅಥಾವೆ ಇವುಗಳನ್ನು ರಚಿಸಿರಿ.

ದಾನಪ್ಪ ಜಾನೇರಿ, ಸಾಕೀನ ಮುಗದ, ಇವನ ಬಾಕಿಗಳ ತಾಳೆ.

| ಜಮೆ | ರೂ. | ಖರ್ಚು | ರೂ. |
|---|---|---|---|
| ಭಾಂಡವಲು | ೬೦೦ | ಕಡೆಯ ದಿವಸದ ರೋಖುಶಿಲಕು | ೫೪೩ |
| ಮಾಲು ವಿಕ್ರಿ | ೫೧೫ | ಮಾಲು ಖರೀದಿ | ೪೭೨ |
| ಕೊಡತಕ್ಕವು | | ಸಾದಿಲವಾರ | ೭ |
| ದೋಣ ರುದ್ರಪ್ಪನಿಗೆ | ೧೦೦ | ಪಗಾರ | ೨೦ |
| ಗಡಾದ ರಾಮಪ್ಪನಿಗೆ | ೬೨ | ಅಂಗಡಿ ಸಾಮಾನು | ೭೫ |
| ಗಣಾದ ರಾಮಪ್ಪನಿಗೆ | ೧೦ | ಬಾಡಿಗೆ | ೬೦ |
| | | ಬರತಕ್ಕವು | |
| | | ಬಾಳ ಸಂಗಪ್ಪ ನಾಯಿಕರಿಂದ | ೪೬ |
| | | ಸಾಲಿ ನಿಂಗಯ್ಯನಿಂದ | ೫೫ |
| | | ಪಟ್ಟಿ ರಾಚಪ್ಪನಿಂದ | ೬೦ |
| | ೧೨೮೭ | | ೧೨ ೭ |

ಕೊನೆಯ ದಿವಸದ ಶಿಲಕು ಮಾಲಿನ ಬೆಲೆ—೧೯೨ ರೂ.

### ಖರೀದಿ ವಿಕ್ರೀಖಾತೆ

ತಾ...............ಇ. ಯಿಂದ ತಾ............ ಇ. ಪೂರ್ತ

| ಜಮೆ | ರೂ. | ಖರ್ಚು | ರೂ. |
|---|---|---|---|
| ೫೧೫ ಮಾಲು ವಿಕ್ರಿ | | ೪೭೨ ಮಾಲು ಖರೀದಿ | |
| ೧೯೨ ಕಡೆಯ ದಿನದ ಶಿಲಕು ಮಾಲು | | ೨೩೫ ಲಾಭ | |
| ೭೦೭ | | ೭೦೭ | |

### ಲಾಭಹಾನಿಯ ಖಾತೆ

ತಾ...............ಇ. ಯಿಂದ ತಾ...............ಇ ಪೂರ್ತ

| ಜಮೆ | ರೂ. | ಖರ್ಚು | ರೂ. |
|---|---|---|---|
| ೨೩೫ ಮಾಲಿನಿಂದ ಬಂದ ಲಾಭ | | ೭ ಸಾದಿಲವಾರ | |
| | | ೨೦ ಪಗಾರ | |
| | | ೩೦ ಬಾಡಿಗೆ | |
| | | ೧೭೮ ನಿವಳ ಲಾಭ | |
| ೨೩೫ | | ೨೩೫ | |

### ಅಢಾವೆಯ ಖಾತೆ

ತಾ...............ಇಸ್ವಿ

| ಜಮೆ | ರೂ. | ಖರ್ಚು | ರೂ. |
|---|---|---|---|
| ೬೦೦ ಭಾಂಡವಲು | | ೫೩೨ ಕಡೆಯ ದಿನದ ರೋಖು ಶಿಲಕು | |
| ೧೭೮ ನಿವಳ ಲಾಭ | | ೧೯೨ ಕಡೆಯ ದಿನದ ಶಿಲಕು ಮಾಲು | |
| ೧೭೨ ಸಾವುಕಾರರಿಗೆ ಕೊಡತಕ್ಕದ್ದು | | ೧೫೧ ಸಾಲಗಾರರಿಂದ ಬರತಕ್ಕದ್ದು | |
| ೧೦೦ ರೋಣ ರುದ್ರಪ್ಪನಿಗೆ | | ೩೬ ಬಾಡ ಸಂಗಪ್ಪನಾಯಕರಿಂದ | |
| ೬೨ ಪಾಲಿ ಚನ್ನಪ್ಪನಿಗೆ | | ೫೫ ಸಾಲಿ ಸಿಂಗಯ್ಯನಿಂದ | |
| ೧೦ ಗಡಾದ ಚನ್ನಪ್ಪನಿಗೆ | | ೬೦ ಮುಟ್ಟೆ ರಾಚಪ್ಪನಿಂದ | |
| ೧೭೨ | | ೧೫೧ | |
| | | ೭೫ ಅಂಗಡಿಯ ಸಾಮಾನು | |
| ೯೫೦ | | ೯೫೦ | |

೬. **ಬಾಕಿಗಳ ತಾಳೆಯ ತಪ್ಪು:** (೧) ಒಂದು ಖಾತೆಯ ಬಾಕಿಯನ್ನು ಬರೆಯುವದನ್ನು ಮರೆತರೆ, (೨) ಬಾಕಿಯನ್ನು ತೆಗೆಯುವದನ್ನು ತಪ್ಪಿದರೆ, (೩) ಒಂದೇ ಬಾಕಿಯನ್ನು ಎರಡು ಸಾರಿ ಬರೆದರೆ, (೪) ಬಾಕಿಗಳ

ಯೋಗ್ಯ ಕಡೆಗೆ ಬೀಳದೆ ಇದ್ದರೆ (೫) ರೂ. ಆ ಪೈಗಳನ್ನು ಬರೆಬುವದನ್ನು ಮರೆತಿದ್ದರೆ ಅಥವಾ ತಪ್ಪಿದ್ದರೆ, ಬಾಕಿಗಳ ತಾಳೆಯು ಎಂದೂ ಸರಿಯಾಗುವದಿಲ್ಲ. ಆದುದರಿಂದ ಮೇಲೆ ಎರಡನೆಯ ಕಲಮಿನಲ್ಲಿ ಹೇಳಿದಂತೆ ಇಂಥ ತಪ್ಪುಗಳನ್ನು ಗೊತ್ತು ಹಚ್ಚಿ ತಿದ್ದಬೇಕು.

ಸೂಚನೆ:—ಇಂಥ ತಾಳೆಗಳನ್ನೆಲ್ಲ ಬರೆದಿಡುವದಕ್ಕಾಗಿ ವರ್ತಕರು ಇಲ್ಲವೆ ಸಾವಕಾರರು ಒಂದು ಬೇರೆ ಪುಸ್ತಕವನ್ನೇ ಕಟ್ಟುವರು. ಅದಕ್ಕೆ ತಾಳೇಬಂದ ಎಂಬ ಹೆಸರು. ಕೆಲವರು ಕೀರ್ದಿಯ ಕೊನೆಯ ಪುಟದಲ್ಲಿ ತಾಳೇಬಂದವನ್ನು ಬರೆಯುವದುಂಟು.

## ೭. ಪ್ರಶ್ನೆಗಳು:—

೧ ಜಮಾಖರ್ಚಿನ ತಾಳೆಗಳು ಯಾವವು? ಪ್ರತಿಯೊಂದರ ಉದ್ದೇಶವೇನು?

೨ ಜಮಾಖರ್ಚು ಸರಿಯಾಗಿರುವದೆಂದು ಹೇಳಲಿಕ್ಕೆ ಯಾವ ಸಂಗತಿಗಳು ಗೊತ್ತಿರಬೇಕು?

೩ ತಾಳೆಗಳು ಸರಿಯಾದರೂ ತಿಳಿಯದ ತಪ್ಪುಗಳು ಯಾವವು? ಅವುಗಳನ್ನು ಹೇಗೆ ಗೊತ್ತು ಹಚ್ಚಬೇಕು? ಉದಾಹರಣೆಗಳಿಂದ ಸ್ಪಷ್ಟೀಕರಿಸಿರಿ.

೪ ಕೀರ್ದಿಯ ಶಿಲಕು ರೋಖ ಶಿಲಕಿಗಿಂತ ಹೆಚ್ಚಾದರೆ ತಪ್ಪು ಯಾವ ಕಡೆಗೆ?

೫ ಯಾವ ತಪ್ಪುಗಳಾದರೆ ಬಾಕಿಗಳ ತಾಳೆಯು ಸರಿಯಾಗುವದಿಲ್ಲ?

ಕೆಳಗೆ ಕೊಟ್ಟ ತಪ್ಪುಗಳನ್ನು ತಿದ್ದಿರಿ.

೬ ತಾ. ೭—೮—೧೯೪೫ ಇಸ್ವಿ ದಿವಸ ಬಸು ತನ್ನ ಕೀರ್ದಿಯಲ್ಲಿ:—

ದೇಸಾಯಿ ನಾಗಪ್ಪನಿಂದ ಬಂದ ೨೫೦ ರೂ. ಗಳನ್ನು ನಾಯಿಕ ನಾಗಪ್ಪನ ಹೆಸರಿನಿಂದ ಜಮೆ ಮಾಡಿದ್ದನು. ಮಾಧವರಾವ ವಕೀಲ ಇವರಿಗೆ ಕೋರ್ಟಿನ ಖರ್ಚಿನ ಸಲುವಾಗಿ ಕೊಟ್ಟ ೫೦ ರೂ. ಗಳನ್ನು ಅವರ ಖಾತೆಗೆ ಖರ್ಚು ಹಾಕಿದ್ದನು. ೧೦೦ ರೂ. ಸಕ್ಕರೆ ಚೀಲ ೨, ದರ ೨೦ ರೂ. ಪ್ರ. ಕಾಪಡವಾಲಾ ಮುಂಬಯಿ ಇವರಿಗೆ ಪರತ ಕಳಿಸಿದ್ದು ಸಕ್ಕರೆಯ ಖಾತೆಗೆ ಖರ್ಚು ಬರೆದಿದ್ದನು. ೩೦೦ ರೂ. ತಿಜೋರಿ ಕೊಂಡದ್ದು ಸಾದಿಲವಾರ ಖಾತೆಗೆ ಖರ್ಚು ಬರೆದಿದ್ದನು.

೭ ಸನ್ ೧೯೪೫ ಇ. ಯಲ್ಲಿ ನಾಗಪ್ಪ ಧಾರವಾಡ ಇವನು ಕೀರ್ದಿಯಲ್ಲಿ:—

ಮಾರ್ಚ ೧೫ನೆಯ ತಾರೀಖಿನ ದಿವಸ ಶಾಮಣ್ಣ ಧಾರವಾಡ ಇವನ ಕಡೆಯಿಂದ ಬಂದ ೧೫ ರೂ. ಗಳನ್ನು ಆಹೆಗಳಂತೆ ಜಮೆ ಮಾಡಿದ್ದನು. ಮೇ ೩೦ನೆಯ ತಾರೀಖಿನ ದಿವಸ ರುಮಾಲ ೧, ದರ ೨೫ ರೂ. ಪ್ರ. ರೋಖ ಮಾರಿದ್ದು ಕೊಣ್ಣೂರ ಕೇಶವರಾಯರ ಖಾತೆಗೆ ಜಮೆ ಬರೆದಿದ್ದನು. ಜೂನ ೧೫ನೆಯ ತಾರೀಖಿನ ದಿವಸ ಧೋತರ ಜೋಡು ೧, ದರ ೨೫ ರೂ. ಪ್ರ. ಮರಾಠೆ ಬಾಳಪ್ಪನ ಕಡೆಯಿಂದ ಪರತ ಬಂದದ್ದು ೨೫ ರೂ. ಶಿಲಕು ಮಾಲಿನ ಖಾತೆಗೆ ಖರ್ಚು ಬರೆದಿದ್ದನು.

---

# ಆರನೆಯ ಪ್ರಕರಣ

## ಮನೆಯ ಜಮಾಖರ್ಚು

೧. ಮನೆಯ ಖಾತೆಗಳು. ೨. ಉದಾಹರಣೆ. ೩. ಕೀರ್ದಿ ೪. ಖತಾವಣಿ (ಅ) ಬಾಕಿಗಳ ತಾಳೆ. (ಬ) ಉತ್ಪನ್ನ ಖರ್ಚಿನ ಪಾತೆ (ಕ) ಅಢಾವೆ. ೫. ತೋಂಡಮಿಳವಣಿ. ೬. ದಾಗೀನೆಗಳ ಯಾದಿ. ೭. ಭಾಂಡೆಗಳ ಯಾದಿ. ೮. ಜವಳಿಯ ಯಾದಿ. ೯. ಇತರ ಸಾಮಾನುಗಳ ಯಾದಿ.

ಪ್ರತಿಯೊಬ್ಬನಿಗೆ ಉತ್ಪನ್ನದ ಬಾಬುಗಳು ಮೂರು ಇರುವವು :—(೧) ಸ್ವಂತ ಗಳಿಕೆಯ ಹಣ. (ಪಗಾರ ಮುಂತಾದ್ದು) (೨) ಆಸ್ತಿಗಳ ಮೇಲಿನ ಉತ್ಪನ್ನ (೩) ಇತರ ಉತ್ಪನ್ನ,

ಖರ್ಚಿನ ಬಾಬುಗಳು ಐದು ಇರುವವು:-(೧) ಊಟ, (೨) ಕಿರುಕಳ (೩) ಜವಳಿ, (೪) ಇತರ ಖರ್ಚು, ಆಸ್ತಿಗಳು.

ಆದರೆ ಎಲ್ಲರ ಯೋಗ್ಯತೆಯೂ ಒಂದೇ ಸಮವಾಗಿ ಇರುವದಿಲ್ಲ. ಅದುದರಿಂದ ಪ್ರಾಪಂಚಿಕರು ಇಂತಿಷ್ಟೇ ಖಾತೆಗಳನ್ನು ಇಡಬೇಕೆಂಬ ನಿಯಮವಿಲ್ಲ. ಅವರವರ ಯೋಗ್ಯತೆ, ಅಗತ್ಯ ಮತ್ತು ಅನುಕೂಲತೆ ಇವುಗಳ ಮೇರೆಗೆ, ಖಾತೆಗಳ ಸಂಖ್ಯೆಯಲ್ಲಿ ಹೆಚ್ಚುಕಡಿಮೆಯಾಗುವದು. ಬಡವರಿಗೆ ಕಡಿಮೆ ಖಾತೆಗಳು ಸಾಕಾಗುವವು. ಆದರೆ ಶ್ರೀಮಂತರಿಗೆ ಹೆಚ್ಚು ಖಾತೆಗಳು ಬೇಕಾಗುವವು.

ಸಾಧಾರಣ ತರಗತಿಯ ಜನರಿಗೆ ಉಪಯೋಗವಾಗುವಂಥ ಖಾತೆಗಳನ್ನು ಮೊದಲನೆಯ ಪ್ರಕರಣದಲ್ಲಿ ಹೇಳಿದೆ. ಆದರೆ ಅಲ್ಲಿ ಹೇಳದಿದ್ದ ಕೆಲವು ಖಾತೆಗಳನ್ನು ಇಲ್ಲಿ ವಿವರಿಸಿದೆ.

ಬಡ್ಡಿಯ ಖಾತೆ:— ಇಡುಗಂಟಿನ ಮೇಲಿನ ಬಡ್ಡಿ, ಕ್ಯಾಶ ಸರ್ಟಿಫಿಕೇಟಿನ ಬಡ್ಡಿ, ಸರಕಾರಿ ಪತ್ರಗಳ ಮೇಲಿನ ಬಡ್ಡಿ, ಶೇರು ಮತ್ತು ಪಾಲಿ

(ಶೇಅರ) ಮೇಲಿನ ಬಡ್ಡಿ, ಸಾಲವಾಗಿ ಕೊಟ್ಟ ಹಣದ ಬಡ್ಡಿ — ಇವುಗಳನ್ನು ಇದೇ ಖಾತೆಗೆ ಜಮೆ ಮಾಡಬೇಕು.

ಇತರ ಉತ್ಪನ್ನ ಖಾತೆ — ವರದಕ್ಷಿಣೆ ಅಥವಾ ತೆರದ ಹಣ, ಲಾಟರಿಯೊಳಗೆ ಬಂದ ಹಣ, ಮನೆಯೊಳಗೆ ಹುಟ್ಟಿ ದೊಡ್ಡವಾದ ದನಕರುಗಳ ಬೆಲೆ, ದತ್ತಕದ ಮುಖಾಂತರ ಬಂದ ಆಸ್ತಿಯ ಬೆಲೆ ಮುಂತಾದವುಗಳ ರಕಮನ್ನು ಈ ಖಾತೆಗೆ ಜಮೆ ಮಾಡಬೇಕು.

**ಊಟದ ಖರ್ಚಿನ ಖಾತೆ:—** ಊಟದ ಖರ್ಚಿನ ಖಾತೆಯೊಂದನ್ನೇ ಇಟ್ಟರೆ ಧಾನ್ಯ, ಕಿರಾಣಿ, ಹೈನ, ಕಾಯಿಪಲ್ಯ, ಉರುವಲ, ಫಲಾಹಾರ ಇವುಗಳ ಮೇಲೆ ಮಾಡಿದ ಖರ್ಚು ಪ್ರತ್ಯೇಕವಾಗಿ ಗೊತ್ತಾಗುವದಿಲ್ಲ ಆದುದರಿಂದ 'ಊಟದ ಖರ್ಚಿನ ಖಾತೆ' ಎಂದು ಒಂದೇ ಖಾತೆಯನ್ನಿಡದೆ ಬೇರೆ ಬೇರೆ ಉಪಭಾಗಗಳ ಖಾತೆಯನ್ನಿಡುವರು.

(ಅ) **ಧಾನ್ಯದ ಖಾತೆ:—** ಪ್ರಪಂಚಕ್ಕೆ ಬೇಕಾಗುವ ಎಲ್ಲ ಧಾನ್ಯದ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯುತ್ತಾರೆ. ಮುಂದಿಗೆ ಮಾರಿದರೆ ಅಥವಾ ಶಿಲಕು ಮಾಲು ಉಳಿದರೆ ಅಷ್ಟು ಧಾನ್ಯದ ಬೆಲೆಯನ್ನು ಈ ಖಾತೆಗೆ ಜಮೆ ಹಿಡಿದು, ಯೋಗ್ಯ ಖಾತೆಗೆ ಖರ್ಚು ಬರೆಯಬೇಕು.

(ಆ) **ಕಿರಾಣಿಯ ಖಾತೆ**—ಎಣ್ಣೆ, ತುಪ್ಪ, ಮಸಾಲೆಯ ಸಾಮಾನು, ಚಹ, ಕಾಫಿ, ಸಕ್ಕರೆ, ಎಲೆ, ದೊನ್ನಿ ಮುಂತಾದ ಸಾಮಾನುಗಳ ಬೆಲೆಯನ್ನು ಇದೇ ಖಾತೆಗೆ ಖರ್ಚು ಬರೆಯಬೇಕು. ಧಾನ್ಯದ ಖಾತೆಯಲ್ಲಿರುವಂತೆ ಯಾರಿಗಾದರೂ ಮಾರಿದರೆ, ಇಲ್ಲವೆ ಶಿಲಕು ಮಾಲು ಉಳಿದರೆ ಈ ಖಾತೆಗೆ ಜಮೆ ಹಿಡಿಯಬೇಕು.

(ಇ) **ಹೈನದ ಖಾತೆ:—** ಹಾಲು ಮೊಸರು, ಬೆಣ್ಣೆ, ತುಪ್ಪಗಳನ್ನ ಕೊಂಡರೆ ಅವುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಹಾಕಬೇಕು. ಎಮ್ಮೆಯನ್ನು ಅಥವಾ ಆಕಳನ್ನು ಕೊಂಡರೆ ಅದರ ಬೆಲೆಯನ್ನೂ ಅದಕ್ಕೆ ತಗಲಿದ ಇತರ ಖರ್ಚಿನ ಬೆಲೆಯನ್ನೂ ಇದೇ ಖಾತೆಗೆ ಖರ್ಚು ಬರೆಯಬೇಕು. ಕರುಗಳು ಹುಟ್ಟಿ ದೊಡ್ಡವಾದ ಮೇಲೆ ಅವುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು, ಮತ್ತು ಇತರ ಉತ್ಪನ್ನ ಖಾತೆಗೆ ಜಮೆ ಮಾಡಬೇಕು.

(ಈ) ಪಲ್ಲೆಕಾಯಿಯ ಖಾತೆ:— ಎಲ್ಲ ತರದ ಕಾಯಿಪಲ್ಲೆಗಳನ್ನು ಈ ಖಾತೆಗೆ ಖರ್ಚು ಬರೆಯಬೇಕು.

(ಉ) ಉರುವಲ ಖಾತೆ:— ಕಟ್ಟಿಗೆ, ಇದ್ದಲಿ, ಕುಳ್ಳು, ಚಿಮ್ಣಿ, ಮುಂತಾದ ಉರುವಲದ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು.

(ಊ) ಫಲಾಹಾರದ ಖಾತೆ:— ಎಲ್ಲ ತರದ ಹಣ್ಣು, ಚುರಮರಿ, ಫುಟಾಣಿ, ಕಬ್ಬು, ಅವಲಕ್ಕಿ, ಪೇಢೆ, ಬೆಂಡು ಬತ್ತಾಸ, ಮುಂತಾದ ತಿನಸುಗಳನ್ನು ಈ ಖಾತೆಗೆ ಖರ್ಚು ಹಾಕಬೇಕು.

ಕಿರಕೋಳ ಖಾತೆ:— ಪ್ರಪಂಚಕ್ಕೆ ಬೇಕಾಗುವ ಸಣ್ಣ ಬೆಲೆಯ ಬಹಳ ಸಾಮಾನುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು.

ಇತರ ಖರ್ಚಿನ ಖಾತೆ:— ದಾನಧರ್ಮ, ಮೇಜವಾನಿ, ಪ್ರಸ್ತ, ಪ್ರಯೋಜನ, ಆಟ-ನೋಟ, ಗಾಯನ, ಸುಗಂಧದ್ರವ್ಯ, ಹೂಮಾಲೆ, ಆಹೇರು, ವರ್ಗಣಿ, ಉತ್ಪನ್ನದ ಮೇಲಿನ ಕರ, ಪಾವತಿ ಟಿಕೀಟು, ಆಳಿಗೆ ಕೊಟ್ಟ ಪಗಾರ, ಗಿಳಿ, ಮಂಗ, ನಾಯಿ, ಬೆಕ್ಕು ಮುಂತಾದವು-ಗಳನ್ನು ಸಾಕಲಿಕ್ಕೆ ಬಂದ ಖರ್ಚು ಇತ್ಯಾದಿ ಖರ್ಚನ್ನು ಈ ಖಾತೆಗೆ ಬರೆಯಬೇಕು.

ಇತರ ಸಾಮಾನುಗಳ ಖಾತೆ:— ಮೋಜಿನ ಸಾಮಾನುಗಳು, ಪುಸ್ತಕಗಳು, ಗಾಯನ ಸಾಧನಗಳು, ದನಕರುಗಳು, ದೊಡ್ಡ ದೊಡ್ಡ ದೀಪಗಳು, ಆಟಿಗೆಗಳು, ಹುಡುಗರನ್ನು ಆಡ್ಡಾಡಿಸಲು ಬೇಕಾಗುವ ಗಾಡಿ, ಸಾಯಕಲ್, ಶಸ್ತ್ರಾಸ್ತ್ರಗಳು, ವಾಹನಗಳು, ಗಾದಿ, ತೆಕ್ಕೆ, ಪಲ್ಲಂಗ, ಕನ್ನಡಿ, ಚಿತ್ರ, ಫೋಟೋ ಮುಂತಾದವುಗಳು – ಇಂಥ ಸಾಮಾನುಗಳ ಬೆಲೆಯನ್ನು ಈ ಖಾತೆಗೆ ಖರ್ಚು ಬರೆಯಬೇಕು

ಉತ್ಪನ್ನ ಖರ್ಚಿನ ಖಾತೆ ಮತ್ತು ಜಿಥಾವೆ ಇವುಗಳನ್ನು ತಯಾರಿಸುವ ಮೊದಲು ಶಿಲಕು ಮಸಾಲು ಖಾತೆ, ಚಿಲ್ಲರೆ ಕೊಡತಕ್ಕವರ ಖಾತೆ, ಇತ್ಯಾದಿ ಖಾತೆಗಳನ್ನು ಬರೆಯಬೇಕು. ಅಂದರೆ ಜಿಥಾವೆಯಲ್ಲಿ ಬರೆಯುವ ಖಾತೆಗಳ ಸಂಖ್ಯೆಯು ಕಡಿಮೆಯಾಗುವದು.

ಕಡ:— ಪ್ರಪಂಚದಲ್ಲಿ ದಿನದ ಉಪಯೋಗಕ್ಕೆ ಬೇಕಾಗುವ ಕಾಳು ಕಡಿ, ಉಪ್ಪು-ಖಾರ ಮುಂತಾದ ಚಿಲ್ಲರ ಸಾಮಾನುಗಳನ್ನು ಕಡವಾಗಿ ಕೊಡು-ಕೊಳ್ಳುವ ರೂಢಿಯು ಇದ್ದೇ ಇರುವದು. ಇಂಥ ಸಾಮಾನುಗಳ ಬೆಲೆಯು ಅಲ್ಪವಾಗಿರುವದರಿಂದಲೂ ಈ ವ್ಯವಹಾರಗಳು ಕೆಲವು ದಿನಗಳ ಮಟ್ಟಿಗೆ ಮಾತ್ರ ಇರುವದರಿಂದಲೂ ಇವನ್ನು ಜಮಾಖರ್ಚಿನಲ್ಲಿ ಬರೆದಿಡುವ ರೂಢಿಯಿಲ್ಲ. ಆದ್ದರಿಂದ ಇವುಗಳ ಜಮಾಖರ್ಚು ಬರೆಯುವ ಕ್ರಮವನ್ನು ಇಲ್ಲಿ ವಿವೇಚಿಸಿರುವದಿಲ್ಲ.

ಶಿಲಕು ಮಾಲಿನ ಖಾತೆ:— ಧಾನ್ಯ, ಕಿರಾಣಿ ಮುಂತಾದ ಅನೇಕ ಖಾತೆಗಳಲ್ಲಿ ಅಥಾವೆ ಕಾಲಕ್ಕೆ ಅಲ್ಪ ಸ್ವಲ್ಪ ಮಾಲು ಉಳಿಯುವ ಸಂಭವವುಂಟು. ತೋಂಡಮಿಳವಣಿಯ ಕಾಲಕ್ಕೆ ಆಯಾ ಸಾಮಾನುಗಳ ಬೆಲೆಯನ್ನು ಆಯಾ ಖಾತೆಗಳಿಗೆ ಜಮೆ ಮಾಡಿ ಶಿಲಕು ಮಾಲಿನ ಖಾತೆಗೆ ಖರ್ಚು ಬರೆಯಬೇಕು. ಅವಧಿಯ ಕೊನೆಗೆ ಅಗಸ, ಕೂಲಿಯವ, ಮುಂತಾದ ಅನೇಕರಿಗೆ ಹಣ ಕೊಡುವದು ಉಳಿಯುವ ಸಂಭವವುಂಟು. ತೋಂಡಮಿಳವಣಿ ಮಾಡುವಾಗ ಕೊಡತಕ್ಕ ಹಣವನ್ನು ಆಯಾ ಜನರಿಗೆ ಕೊಟ್ಟಿದೆ ಎಂದು ತಿಳಿದು, ಅವರವರ ಖಾತೆಗಳಿಗೆ ಖರ್ಚು ಬರೆದು, 'ಚಿಲ್ಲರೆ ಕೊಡತಕ್ಕವರ ಖಾತೆ' ಎಂಬ ಒಂದು ಬೇರೆ ಖಾತೆಯನ್ನು ಬರೆದು ಅದಕ್ಕೆ ಆ ರಕಮನ್ನು ಜಮೆ ಮಾಡಬೇಕು.

ಮೇಲೆ ಹೇಳಿದ ಖಾತೆಗಳನ್ನು ಪ್ರತಿಯೊಬ್ಬನೂ ಇಡಬೇಕೆಂಬ ನಿಯಮವಿಲ್ಲ. ಇವುಗಳಲ್ಲಿ ತಮತಮಗೆ ಬೇಕಾಗುವಷ್ಟು ಖಾತೆಗಳನ್ನು ಇಟ್ಟರೂ ನಡೆಯುವದು.

[೧] ಮನೆಯ ಜಮಾಖರ್ಚಿನ ಹಲವು ಖಾತೆಗಳನ್ನೊಳಗೊಂಡ ಒಂದು ಸಾದಾಸರಿಯ ಉದಾಹರಣೆಯನ್ನು ಕೊಟ್ಟು ಇಲ್ಲಿ ಬರೆದು ತೋರಿಸಿವೆ.

ಉದಾಹರಣೆ:— ಸತ್ಯಪ್ಪ ತಿಮ್ಮಪ್ಪ ಗುಜ್ಜರ ಇವರ ೧೯೪೫ನೆಯ ಇಸ್ವಿಯ ಫೆಬ್ರುವರಿ ತಿಂಗಳ ಬೈಠಿಕೆಟೀಪ ಬರೆಯಬೇಕಾಗಿದೆ; ಅವನ ದಿನಚರ್ಯ (ಡಾಯರಿ)ಯೊಳಗಿನ ಟಿಪ್ಪಣಿಗಳನ್ನು ಕೆಳಗೆ ಕೊಟ್ಟಿವೆ. ಅವುಗಳ ಆಧಾರದಿಂದ ತಿಂಗಳ ಕೊನೆಯ ದಿವಸ ಅವನ ಕೀರ್ದಿ ಮತ್ತು ಖತಾವಣಿಗಳನ್ನು ಬರೆಯಿರಿ. ತೋ. ಮಿ. ಮಾಡಿ ಬ. ಖ ಖಾತೆ ಅಥಾವೆಗಳನ್ನೂ ಬರೆಯಿರಿ.

ಆಸ್ತಿಗಳು-ಕೆನರಾ ಬ್ಯಾಂಕಿನಲ್ಲಿ ೧೦೦ ರೂ. ಶಿಲಕು, ದಾಗೀನೆಗಳು, ೨೦೦ ರೂ. ಭಾಂಡೆಗಳು, ೧೦೦ ರೂ. ಇತರ ಸಾಮಾನು ೫೦ ರೂ. ರೋಖ ಶಿಲಕು, ೨೫ ರೂ.

ಬರತಕ್ಕದ್ದು:— ಜಾಧವ ಶಂಕರರಾಯರಿಂದ ೫ ರೂ.

ಕೊಡತಕ್ಕದ್ದು:— ನಾಡಿಗೇರ ಅಶ್ವತ್ಥರಾಯರಿಗೆ ೧೦ ರೂ.

ತಾ. ೧-ಪಗಾರ ೮೦ ರೂ. ಬಂತು. ೧ ಆಣೆ ಟಿಕೀಟು ಹಚ್ಚಿತು. ೭ ಆಣೆಗಳ ಕಾರ್ಡ ಟಿಕೀಟು ತರಿಸಿತು.

ತಾ. ೪- ಅಕ್ಕಿ ೧೦ ರೂ. ಜೋಳ, ೨ ರೂ. ಬೇಳೆಯು ಕಾಳು ೨ ರೂ. ಕಿರುಕಳ ಧಾನ್ಯ ೧ ರೂ. ಕೊಂಡಿತು.

ತಾ. ೬- ಗಾಣದೆಣ್ಣೆ, ೧ ರೂ. ಕೊಬ್ಬರಿ ಎಣ್ಣೆ ೮ ಆ. ಚಿಮಣಿ ಎಣ್ಣೆ ೧ ರೂ. ಉರುವಲ ೪ ರೂ. ರೋಖ ಕೊಂಡಿತು.

ತಾ. ೧೦- ಕಿರಾಣಿ ಸಾಮಾನು:- ಸಕ್ಕರೆ ೧ ರೂ. ಚಹದ ಪುಡಿ ೬ ಆಣೆ ಟೆಂಗಿನ ಕಾಯಿ ೮ ಆಣೆ, ಬೆಲ್ಲ, ೧ ರೂ ೨ ಆ. ಕಿರುಕಳ ಸಾಮಾನು ೮ ಆ ರಾಜೇಸಾಹೇಬರ ಅಂಗಡಿಯಲ್ಲಿ ಉದ್ರಿ ತಂದಿತು.

ತಾ. ೧೫- ಜವಳಿ:- ೧ ರೂ. ೮ ಆ. ಗಳಿಗೆ ಒಂದು ಹೊಲಿಸಿದ ಅಂಗಿ, ೮ ಆಣೆ ಗಳಿಗೆ ಒಂದು ಟೊಪ್ಪಿಗೆ ಕೊಂಡಿತು.

ತಾ. ೨೦- ಬೆಳ್ಳಿಯ ಸರಪಳಿ ೧೫ ರೂ. ಗೆ ಕೊಂಡನು.

ತಾ. ೨೨-ಪ್ರಲ್ಹಾದರಾಯರಿಂದ ೫ ರೂ. ಬಂದವು. ಅಶ್ವತ್ಥರಾಯರಿಗೆ ೧೦ ರೂ. ಕೊಟ್ಟಿತು.

ತಾ. ೨೫- ಸಿನೇಮಾ ನೋಡಲಿಕ್ಕೆ ಹೋದಾಗ ಆದ ವೆಚ್ಚ ರೂ. ೪ ಆ.

ತಾ. ೨೮- ಹಾಲಿನ ಲೆಕ್ಕ ೪ ರೂ. ೮ ಆ. ಬೆಣ್ಣೆ ೩ ರೂ. ೮ ಆ. ಅಗಸನಿಗೆ ೬ ಆ. ನಾಪಲಿಗನಿಗೆ ೪ ಆ. ಮುಸರಿ ತಿಕ್ಕುವಳಿಗೆ ೧ ರೂ. ವಾಚನಾಲಯದ ವರ್ಗಣಿ ೪ ಆ. ರೋಖು ಕೊಟ್ಟಿತು. ಔಷಧ ೧೨ ಆ. ಚಿಲ್ಲರೆ, ೪ ಆಣೆ ಈ ತಿಂಗಳಲ್ಲಿ ಕಾಯಿಪಲ್ಲೆ ಮತ್ತು ಫಳಾಹಾರ, ಆಟಿಗೆಯ ಸಾಮಾನು ಮೊದಲಾದವುಗಳಿಗಾಗಿ ೧ ರೂ. ೬ ಆ. ವೆಚ್ಚ ಬಂದಿದೆ.

ಶಿಲಕು ಮಾಲು ೧ ರೂ. ಯ ಅಕ್ಕಿ.

೯೯. ೩೯. ಪಾ.

ರಾ. ರಾ. ಸತ್ಯಪ್ಪ ತಿಮ್ಮಪ್ಪ ಗುಚ್ಚಲ ಸಾಕೀನ ಧಾರವಾಡ ಇವರ ೧೯೪೫ನೆಯ ಫೆಬ್ರುವರಿ ತಿಂಗಳ ಮನೆಯ ಜಮಾಖರ್ಚು.

## ಬೈರೀ ಕೀರ್ದಿ

ತಾ. ೧ರಿಂದ ೩೮ ಪೂರ್ಣ ಫೆಬ್ರುವರಿ ೧೯೪೫

| ಜಮೆ | ರೂ. | ಖರ್ಚು | ರೂ. |
|---|---|---|---|
| ೪೭೦ ಖುದ್ದ ಖಾತೆ:— ಆರಂಭದ ಸ್ಥಿತಿಯ ವಿವರ: ೨೫ ರೋಖ ಶಿಲಕು; ೧೦೦ ಕೆನರಾ ಬ್ಯಾಂಕಿನಲ್ಲಿ ಶಿಲ್ಕು; ೨೦೦ ದಾಗೀನೆಗಳ ಬೆಲೆ; ೧೦೦ ಭಾಂಡೆಗಳ ಬೆಲೆ; ೫೦ ಇತರ ಸಾಮಾನುಗಳ ಬೆಲೆ; ೪೭೫ ಆಯಾ ಖಾತೆಗಳಿಗೆ ಖರ್ಚು. –೧೦ ಕೊಡತಕ್ಕದ್ದು ವಜಾ ನಾಡಿಗೇರ ಅಶ್ವತ್ಥರಾಯರ ಹೆಸರಿನಿಂದ ಜಮೆ. ೪೬೫ + ೫ ಬರತಕ್ಕದ್ದು ಜಾಧವ ಶಂಕರರಾಯರ ಹೆಸರಲೆ ಖರ್ಚು. ೪೭೦ ಅಂತೂ. ತಾ. ೧ ೨ ೧೯೪೫ ಖಾ. ಪಾ. | | ೧೦೦ ಕೆನರಾ ಬ್ಯಾಂಕಿನ ಖಾತೆ:— ಈ ಹೊತ್ತಿಗೆ ಶಿಲಕು ಇದ್ದುದರಿಂದ ಖುದ್ದ ಖಾತೆಗೆ ಜಮೆ ಆಗಿದೆ. ತಾ. ೧ ಖಾ. ಪಾ. | |
| ೧೦ ನಾಡಿಗೇರ ಅಶ್ವತ್ಥರಾಯರ ಖಾತೆ:— ಬಾಕೀ ಕೊಡತಕ್ಕದ್ದು ಖುದ್ದ ಖಾತೆಯಲ್ಲಿ ವಜಾ ಆಗಿದೆ. ತಾ. ೧ ಖಾ. ಪಾ. | | ೨೦೦ ದಾಗೀನೆಗಳ ಖಾತೆ:— ಈ ಹೊತ್ತಿನ ದಿವಸ ಮನೆಯಲ್ಲಿರುವ ದಾಗೀನೆಗಳ ಬೆಲೆ. ತಾ. ೧ ಖಾ. ಪಾ. | |
| ೮೦ ಪಗಾರ ಖಾತೆ:— ಜನವರಿ ತಿಂಗಳ ಪಗಾರ ಬಂತು. ತಾ. ೧ ಖಾ. ಪಾ. | | ೧೦೦ ಭಾಂಡೆಗಳ ಖಾತೆ:— ಈ ದಿನದ ಯಾದಿಯ ಪ್ರಕಾರ ಭಾಂಡೆಗಳ ಬೆಲೆಯು ಖುದ್ದ ಖಾತೆಗೆ ಜಮೆ ಆಗಿದೆ. ತಾ. ೧ ಖಾ. ಪಾ. | |
| | | ೫೦ ಇತರ ಸಾಮಾನುಗಳ ಖಾತೆ— ಈಗಿದ್ದ ಇತರ ಸಾಮಾನುಗಳ ಬೆಲೆ ಖುದ್ದ ಖಾತೆಗೆ ಜಮೆ. ತಾ. ೧ ಖಾ. ಪಾ. | |
| | | ೫ ಜಾಧವ ಶಂಕರರಾಯರ ಖಾತೆ: ಹಿಂದಿನ ಬಾಕಿ ಬರತಕ್ಕದ್ದು ಖುದ್ದ ಖಾತೆಯಲ್ಲಿ ಜಮೆ ಆಗಿದೆ. ತಾ. ೧ ಖಾ. ಪಾ. | |
| | | ೦-೮-೦ ಸಾದಿಲವಾರ ಖಾತೆ:— ಟಿಕೀಟು ೧ ಆ. ತಾ. ೧ ಕಾರ್ಡ, ಟಿಕೀಟು ೭ ಆ. ತಾ. ೧ ಖಾ. ಪಾ. | |

೩-೮-೦ ರಾಜೇಸಾಹೇಬರ ಖಾತೆ:—
ಕಿರಾಣಿ ಸಾಮಾನುಗಳನ್ನು
ಉದ್ರಿ ತಂದದ್ದರಿಂದ ಖರ್ಚು.
ತಾ. ೧೦ ಖಾ. ಪಾ.

---

೫-೦-೦ ಜಾಧವ ಶಂಕರರಾಯರ
ಖಾತೆ:—
ಹಿಂದಿನ ಬಾಕಿ ಬರತಕ್ಕದ್ದನ್ನು
ಕಳಿಸಿದರು.
ಹಸ್ತೆ—ನವಿಲಗುಂದ ಶಂಕರ.
ಖಾ. ಪಾ. ತಾ. ೨೨

---

೧-೦-೦ ಧಾನ್ಯ ಖಾತೆ:—
ತಿಂಗಳ ಕೊನೆಗೆ ಶಿಲಕು
ಉಳಿದ ಮಾಲಿನ ಬೆಲೆ.
ಅಕ್ಕಿ ೫ ಸೇರು ಬೆಲೆ ೧ ರೂ.
ಶಿಲಕು ಮಾಲಿನ ಖಾತೆಗೆ
ಖರ್ಚು.

ತಾ. ೨೮ ಖಾ ಪಾ.

---

೧೫-೦-೦ ಧಾನ್ಯ ಖಾತೆ:—
೧೦ ಅಕ್ಕಿ ದರ ೫ ಸೇರು
೨ ಜೋಳ ದರ ೬ ಸೇರು
೨ ಬೇಳೆಯು ಕಾಳು ದರ
೪ ಸೇರು.
೧ ಕಿರುಕಳ ಕಾಳುಗಳು.
೧೫
ತಾ. ೪ ಖಾ. ಪಾ.

---

೬-೮-೦ ಎಣ್ಣೆ ಉರುವಲಗಳ
ಖಾತೆ:—
ವಿವರ
೧-೦-೦ ಗಾಣದೆಣ್ಣೆ ೪ ಸೇರು
೦-೮-೦ ಕೊಬ್ಬರಿ ಎಣ್ಣೆ ೨ ಸೇ.
೧-೦-೦ ಚಿಮಣೀ ಎಣ್ಣೆ
೧೩ ಸೇರು
೪-೦-೦ ದಿಂಡಲಕಟಿಗೆ ॥ ಗಾಡಿ
೬-೮-೦
ತಾ ೬ ಖಾ. ಪಾ.

---

೩-೮-೦ ಕಿರಾಣಿ ಸಾಮಾನುಗಳ
ಖಾತೆ:—
ವಿವರ
೧-೦-೦ ಸಕ್ಕರಿ ೫ ಪೌಂಡು
೦-೬-೦ ಚಹಪುಡಿ .।. ಪೌ.
೦-೮-೦ ಟೆಂಗಿನಕಾಯಿ ೪
೧-೨-೦ ಬೆಲ್ಲ ೧೨ ಸೇರು
೦-೮-೦ ಕಿರುಕಳ ಸಾಮಾನು
೩-೮-೦
ಉದ್ರಿ ತಂದದ್ದರಿಂದ ಸುನಗದ
ರಾಜೇಸಾಹೇಬರ ಖಾತೆಗೆ ಜಮು
ತಾ. ೧೦ ಖಾ. ಪಾ.

೨-೦-೦ ಜವಳಿಯ ಖಾತೆ:— ವಿವರ
೧ ೮-೦ ಅಂಗಿ ೧
೦-೮-೦ ಟೊಪ್ಪಿಗೆ ೧

೨-೦ ೦

ಹಸ್ತೆ-ಶಿವಪ್ಪ ಬೂದಪ್ಪ
ತಾ. ೧೫ ಮಾ. ಪಾ.

---

೧೫-೦-೦ ದಾಗೀನೆಗಳ ಖಾತೆ:-ಮಗಳಿಗೆ
ಬೆಳ್ಳಿಯ ಸರಪಳಿ ತೂಕ ೧೨
ತೊ. ದರ ೧ ರೂ. ೪ ಆ. ಪ್ರ.
ಶಿವಾನಂದ ಗಾಯತೋಂಡೆ
ಸರಾಫರಲ್ಲಿ ಕೊಂಡಿತು
ಹಸ್ತೆ-ಯೋಹಾನ ನಿಲುಗಲ್ಲು.
ತಾ. ೨೦ ಮಾ. ಪಾ.

---

೧೦-೦-೦ ನಾವಿಗೇರ ಅಶ್ವತ್ಥರಾಯರ
ಖಾತೆ:— ಕೊಡತಕ್ಕ ಬಾಕೀ
ಹಣ ಕಳಿಸಿದೆವು.
ಹಸ್ತೆ-ಕಲಭಾವಿ ಫಕೀರಪ್ಪ
ತಾ. ೨೨ ಮಾ. ಪಾ.

---

೧-೪-೦ ಇತರ ಖರ್ಚು ಖಾತೆ:-ವಿವರ
೦-೪-೦ ಗೋರಾ ಕುಂಬಾರ
ಸಿನೇಮಾಕ್ಕೆ ಮನೆ
ಯವರೆಲ್ಲರೂ
ಹೋಗಿದ್ದೆವು.
ತಾ. ೨೫
೧-೦-೦ ಈ ತಿಂಗಳಲ್ಲಿ ಚಿಲ್ಲರೆ
ಯಾಗಿ ಕೊಟ್ಟದ್ದು.

೧-೪-೦
ತಾ. ೨೮ ಮಾ. ಪಾ.

---

೪-೦-೦ ಕಿರುಕೋಳ ಖಾತೆ:—ವಿವರ
೦-೧೨-೦ ಅಮ್ಮ ಸಂಧಾ ಮಹಿಸಿ
ಯವರದು. ತಾ. ೨೫
೦-೬-೦ ಅಗಸರ ಬಾಬುಸಿಗೆ
ತಾ. ೨೬

೦-೪-೦ ನಾವಲಿಗನಿಗೆ

೧-೦-೦ ಮುಗರಿ ತಿಕ್ಕುವವಳಿಗೆ ತಾ. ೨೮

೦-೪-೦ ವಾಚನಾಲಯದ ವರ್ಗಣಿ ತಾ. ೨೮

೦-೬-೦ ಫಲಾರ—ಪಲ್ಲೆ ಕಾಯಿ ಇತ್ಯಾದಿಗಳಿಗಾಗಿ ತಾ. ೨೮

೪-೦-೦

ತಾ. ೨೮ ಖಾ. ಪಾ.

---

೮-೦-೦ ಹೈನದ ಖಾತೆ:— ವಿವರ

೪-೦-೦ ಈ ತಿಂಗಳಲ್ಲಿ ೨೭ ಸೇರು ಹಾಲು ದರ ೬ ಸೇರುಗಳಂತೆ

೩-೮-೦ ಬೆಣ್ಣೆ ದರ ೪ ಅ. ೧೪ ಸೇ

೮-೦-೦ ಅಂತೂ

ತಾ. ೨೮ ಖಾ. ಪಾ.

---

೧-೦-೦ ಶಿಲಕುಮಾಲಿನ ಖಾತೆ:— ಅಕ್ಕಿ ೫ ಸೇರು ಉಳಿದವು ಧಾನ್ಯ ಖಾತೆಗೆ ಜಮೆ.

ತಾ. ೨೮ ಖಾ. ಪಾ.

---

೪೭-೮-೦ ಕೊನೆಯ ಶಿಲಕು

೬೨-೮-೦ ರೋಖು

೪೫೯-೮-೦ ಪರಭಾರೆ

೫೨೨-೦-೦ ಅಂತೂ ಖರ್ಚು

೫೬೯-೮-೦

೧೧೦-೦-೦ ರೋಖು

೪೫೯-೮-೦ ಪರಭಾರೆ

೫೬೯-೮-೦ ಅಂತೂ ಜಮೆ.

ಅಂತೂ— ಐದುನೂರಾ ಅರವತ್ತೊಂಬತ್ತು ರೂಪಾಯಿ ಎಂಟು ಆಣೆಗಳ ಜಮಾಖರ್ಚು ಮಾತ್ರ.

ಸ. ಶಿ. ಗಜ್ಜಲ

ದಸ್ತೂರ ಖುದ್ದ

## ತೋಂಡಮಿಳವಣಿ ಕೀರ್ದಿ

ತಾ. ೨೮—೨—೧೯೪೫ ಇ.

ಜಮೆ——————ರೂ.

೮೦ ಉತ್ಪನ್ನ ಖರ್ಚಿನ ಖಾತೆ:—
ಪಗಾರ ೮೦ ರೂ. ಬಂದಿದೆ ಆಯಾ ಖಾತೆಗೆ ಖರ್ಚು.
ಖಾ. ಪಾ.

---

೦ ೮ ೦ ಸಾದಿಲವಾರ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ ಖರ್ಚಿನ ಖಾತೆಗೆ ಖರ್ಚು.
ಖಾ. ಪಾ.

---

೧೪ ೦ ೦ ಧಾನ್ಯ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ ಖರ್ಚಿನ ಖಾತೆಗೆ ಖರ್ಚು.
ಖಾ. ಪಾ.

---

೬ ೮ ೦ ಎಣ್ಣೆ ಉರುವಲಗಳ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ ಖರ್ಚಿನ ಖಾತೆಗೆ ಖರ್ಚು.
ಖಾ. ಪಾ.

---

೩ ೮ ೦ ಕಿರಾಣಿ ಸಾಮಾನುಗಳ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ ಖರ್ಚಿನ ಖಾತೆಗೆ ಖರ್ಚು.
ಖಾ. ಪಾ.

---

೨ ೦ ೦ ಜವಳಿ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ ಖರ್ಚಿನ ಖಾತೆಗೆ ಖರ್ಚು.
ಖಾ. ಪಾ.

---

ಖರ್ಚು——————ರೂ.

೮೦ ಪಗಾರ ಖಾತೆ:.... ತೋ. ಮಿ ಮಾಡಿದ್ದರಿಂದ ಉತ್ಪನ್ನ ಖರ್ಚಿನ ಖಾತೆಗೆ ಜಮೆ.
ಖಾ. ಪಾ.

---

೮೦ ಉತ್ಪನ್ನ ಖರ್ಚಿನ ಖಾತೆ:—
೦ ೮ ೦ ಸಾದಿಲವಾರ
೧೪ ೦ ೦ ಧಾನ್ಯ
೬ ೦ ೦ ಎಣ್ಣೆ ಉರುವಲ
೩ ೮ ೦ ಕಿರಾಣಿ ಸಾಮಾನು
೨ ೦ ೦ ಜವಳಿ
೧ ೮ ೦ ಇತರ ಖರ್ಚು
೪ ೦ ೦ ಕಿರುಕೋಳ
೮ ೦ ೦ ಹೈನ
೪೦ ೦ ೦ ನಕ್ಕೀ ಉಳಿತಾಯ (ಅಧಾವೆ ಖಾತೆಗೆ ಜಮೆ)
೮೦ ೦ ೦
ಆಯಾ ಖಾತೆಗಳಿಗೆ ಜಮೆ
ಖಾ. ಪಾ.

---

೪೬೦ ಖುದ್ದ ಖಾತೆ:—
ಬಾಯಿಗೂಡಿಸಿದ್ದರಿಂದ ಅಧಾವೆ ಖಾತೆಗೆ ಜಮೆ.
ಖಾ. ಪಾ.

---

೩ ೮ ೦ ಸುನಗದ ರಾಜೇಸಾಹೇಬರ ಖಾತೆ:— ಬಾಯಿಗೂಡಿಸಿದ್ದರಿಂದ ಅಧಾವೆ ಖಾತೆಗೆ ಜಮೆ.
ಖಾ. ಪಾ.

---

೧-೮-೦ ಇತರ ಖರ್ಚಿನ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ
ಖರ್ಚಿನ ಖಾತೆ ಖರ್ಚು.
ಖಾ. ಪಾ.

---

೯-೦-೦ ಕಿರುಕೋಳ ಖಾತೆ:—
ಬಾಯಿಗೂಡಿಸಿದ್ದರಿಂದ ಉತ್ಪನ್ನ
ಖರ್ಚಿನ ಖಾತೆಗೆ ಖರ್ಚು.
ಖಾ. ಪಾ.

---

೮-೦-೦ ಹೈನದ ಖಾತೆ:— ಬಾಯಿಗೂಡಿ
ಸಿದ್ದರಿಂದ ಉತ್ಪನ್ನ ಖರ್ಚಿನ
ಖಾತೆಗೆ ಖರ್ಚು.
ಖಾ. ಪಾ.

---

೧೩-೮-೦ ಅಧಾವೆ ಖಾತೆ:— ವಿವರ
೪೭೦ ಖುದ್ದ ಖಾತೆ
೪೦ ನಕ್ಕೀ ಉತ್ಪನ್ನ
೩-೬-೦ ರಾಜೇಸಾಹೇಬರು

೫೧೩-೮-೦
ಆಯಾ ಖಾತೆಗಳಿಗೆ
ಖರ್ಚು.
ಖಾ. ಪಾ.

---

೫೦೦ ಕೆನರಾ ಬ್ಯಾಂಕ ಖಾತೆ:—
ಬಾಯಿಗೂಡಿಸಿದ್ದರಿಂದ ಅಧಾವೆ
ಖಾತೆಗೆ ಖರ್ಚು.
ಖಾ. ಪಾ.

---

೨೧೫ ದಾಗೀನೆಗಳ ಖಾತೆ:—
ಬಾಯಿಗೂಡಿಸಿದ್ದರಿಂದ ಅಧಾವೆ
ಖಾತೆಗೆ ಖರ್ಚು.
ಖಾ. ಪಾ.

---

೪೬೬ ಅಧಾವೆ ಖಾತೆ:— ವಿವರ
೧೦೦ ಕೆನರಾ ಬ್ಯಾಂಕ
೨೧೫ ದಾಗೀನೆಗಳು
೧೦೦ ಭಾಂಡೆ ಸಾಮಾನು
೫೦ ಇತರ ಸಾಮಾನುಗಳು
೧ ಶಿಲಕು ಮಾಡಿದ ಟಿಕಿ

೪೬೬ ಆಯಾ ಖಾತೆಗಳಿಗೆ
ಜಮೆ.
ಖಾ. ಪಾ.

---

೧೦೦ ಭಾಂಡೆಗಳ ಖಾತೆ:—
ಬಾಯುಗೂಡಿಸಿದ್ದರಿಂದ ಅಥಾವೆ
ಖಾತೆಗೆ ಖರ್ಚು.
ಖಾ ಪಾ.

೫೦ ಇತರ ಸಾಮಾನುಗಳ ಖಾತೆ:—
ಬಾಯುಗೂಡಿಸಿದ್ದರಿಂದ ಅಥಾವೆ
ಖಾತೆಗೆ ಖರ್ಚು.
ಖಾ. ಪಾ.

೧ ಶಿಲಕು ಮಾಲಿನ ಖಾತೆ:—
ಬಾಯುಗೂಡಿಸಿದ್ದರಿಂದ ಅಥಾವೆ
ಖಾತೆಗೆ ಖರ್ಚು.
ಖಾ. ಪಾ.

೧೦೬೯·೮·೦ ೧೦೬೯·೮·೦

ಅಂತೂ ಒಂದು ಸಾವಿರದ ಅರವತ್ತೊಂಭತ್ತು ರೂಪಾಯಿ ಎಂಟು ಆಣೆಗಳ ಜೋಂಡಮಿಳವಣಿ ಮಾತ್ರ.

## ಖತಾವಣಿ

ಮೂಲಕರು:— ಶ್ರೀ. ಸತ್ಯಪ್ಪ ತಿಮ್ಮಪ್ಪ ಗುಜ್ಜಲ, ಫೇಬ್ರುವರಿ ೧೯೪೫

### ಖುದ್ದ ಖಾತೆ ಪಾನು ೨

| ಜಮೆ | ರೂ. | ಖರ್ಚು | ರೂ. |
|---|---|---|---|
| ಕೀ. ಪಾ. ತಾ. ೧ | ೪೭೦ | ಜೋ. ಮಿ. ತಾ. ೨೮ | ೪೭೦ |
| | ೪೭೦ | | ೪೭೦ |

### ಶ್ರೀ ಸಾಡಿಗೇರ ಅಶ್ವತ್ಥರಾಯರ ಖಾತೆ ಪಾನು ೨

| ಜಮೆ | ರೂ. | ಖರ್ಚು | ರೂ. |
|---|---|---|---|
| ಕೀ. ಪಾ. ತಾ. ೧ | ೧೦ | ಕೀ. ಪಾ. ತಾ. ೨೨ | ೧೦ |
| | ೧೦ | | ೧೦ |

### ಪಗಾರ ಖಾತೆ — ಪಾನು ೩

| ಜಮೆ | ರೂ. | ಖರ್ಚು | ರೂ. |
|---|---|---|---|
| ಕೀ. ಪಾ. ತಾ. ೧ | ೮೦ | ತೋ. ಮಿ. ತಾ. ೨೮ | ೮೦ |
| | ೮೦ | | ೮೦ |

### ಸುನಗದ ರಾಜೇಸಾಹೇಬರ ಖಾತೆ — ಪಾನು ೪

| ಜಮೆ | ರೂ. | ಖರ್ಚು | ರೂ. |
|---|---|---|---|
| ಕೀ. ಪಾ. ತಾ. ೧೦ | ೩೮೦ | ತೋ. ಮಿ. ತಾ. ೨೮ | ೩೮೦ |
| | ೩೮೦ | | ೩೮೦ |

### ಶ್ರೀ. ಜಾಧವ ಶಂಕರರಾಯರ ಖಾತೆ — ಪಾನು ೫

| ಜಮೆ | ರೂ. | ಖರ್ಚು | ರೂ. |
|---|---|---|---|
| ಕೀ. ಪಾ. ತಾ. ೨೩ | ೫ | ಕೀ. ಪಾ. ತಾ. ೧ | ೫ |
| | ೫ | | ೫ |

### ಕೆನರಾ ಬ್ಯಾಂಕಿನ ಖಾತೆ — ಪಾನು ೬

| ಜಮೆ | ರೂ. | ಖರ್ಚು | ರೂ. |
|---|---|---|---|
| ತೋ. ಮಿ. ತಾ. ೨೮ | ೧೦೦ | ಕೀ. ಪಾ. ತಾ. ೧ | ೧೦೦ |
| | ೧೦೦ | | ೧೦೦ |

### ದಾಗೀನೆಗಳ ಖಾತೆ — ಪಾನು ೭

| ಜಮೆ | ರೂ. | ಖರ್ಚು | ರೂ. |
|---|---|---|---|
| ತೋ. ಮಿ. ತಾ. ೨೮ | ೨೧೫ | ಕೀ. ಪಾ. ತಾ. ೧ | ೨೦೦ |
| | | ಕೀ. ಪಾ. ತಾ. ೨೩ | ೧೫ |
| | ೨೧೫ | | ೨೧೫ |

### ಭಾಂಡೆಗಳ ಖಾತೆ — ಪಾನು ೮

| ಜಮೆ | ರೂ. | ಖರ್ಚು | ರೂ. |
|---|---|---|---|
| ತೋ. ಮಿ. ತಾ. ೨೮ | ೧೦೦ | ಕೀ. ಪಾ. ತಾ. ೧ | ೧೦೦ |
| | ೧೦೦ | | ೧೦೦ |

## ಸಾದಿಲವಾರ ಖಾತೆ — ಪಾನು ೯

| ಜಮೆ ರೂ. | ಖರ್ಚು ರೂ. |
|---|---|
| ೦ ೮ ೦ ತೋ. ಮಿ. ತಾ. ೨೮ | ೦ ೮ ೦ ಕೀ. ಪಾ. ತಾ. ೧ |
| ೦ ೮ ೦ | ೦ ೮ ೦ |

## ಧಾನ್ಯ ಖಾತೆ — ಪಾನು ೧೦

| ಜಮೆ ರೂ. | ಖರ್ಚು ರೂ. |
|---|---|
| ೧ ಕೀ. ಪಾ. ತಾ. ೨೮ | ೧೫ ಕೀ. ಪಾ. ತಾ. ೪ |
| ೧೪ ತೋ. ಮಿ. ತಾ. ೨೮ | |
| ೧೫ | ೧೫ |

## ಎಣ್ಣೆ ಉರುವಲಗಳ ಖಾತೆ — ಪಾನು ೧೧

| ಜಮೆ ರೂ. | ಖರ್ಚು ರೂ. |
|---|---|
| ೬ ೮ ೦ ತೊ. ಮಿ. ತಾ. ೨೮ | ೬ ೮ ೦ ಕೀ. ಪಾ. ತಾ. ೬ |
| ೬ ೮ ೦ | ೬ ೮ ೦ |

## ಕಿರಾಣಿ ಸಾಮಾನುಗಳ ಖಾತೆ — ಪಾನು ೧೨

| ಜಮೆ ರೂ. | ಖರ್ಚು ರೂ. |
|---|---|
| ೩ ೮ ೦ ತೊ. ಮಿ. ತಾ. ೨೮ | ೩ ೮ ೦ ಕೀ. ಪಾ. ತಾ. ೧೦ |
| ೩ ೮ ೦ | ೩ ೮ ೦ |

## ಜವಳಿ ಖಾತೆ — ಪಾನು ೧೩

| ಜಮೆ ರೂ. | ಖರ್ಚು ರೂ. |
|---|---|
| ೨ ತೋ. ಮಿ. ತಾ. ೨೮ | ೨ ಕೀ. ಪಾ. ತಾ. ೧೫ |
| ೨ | ೨ |

## ಇತರ ಖರ್ಚು ಖಾತೆ — ಪಾನು ೧೪

| ಜಮೆ ರೂ. | ಖರ್ಚು ರೂ. |
|---|---|
| ೧ ೮ ೦ ತೊ. ಮಿ. ತಾ. ೨೮ | ೧ ೮ ೦ |
| ೧ ೮ ೦ | ೧ ೮ ೦ |

### ಕಿರುಕೋಳ ಖಾತೆ ಪಾನು ೧

| ಜಮೆ | ರೂ. | ಖರ್ಚ | ರೂ. |
| --- | --- | --- | --- |
| ೪ ತೋ. ಮಿ. ತಾ. ೨೮ | | ೪ ಕೀ. ಖಾ. ತಾ. ೨೭ | |
| ೪ | | ೪ | |

### ಹೈನದ ಖಾತೆ ಪಾನು ೧೬

| ಜಮೆ | ರೂ. | ಖರ್ಚ | ರೂ. |
| --- | --- | --- | --- |
| ೭ ತೋ. ಮಿ. ತಾ. ೨೮ | | ೬ ಕೀ. ಖಾ. ತಾ. ೨೭ | |
| ೭ | | ೬ | |

### ಇತರ ಸಾಮಾನುಗಳ ಖಾತೆ ಪಾನು ೧೬

| ಜಮೆ | ರೂ. | ಖರ್ಚ | ರೂ. |
| --- | --- | --- | --- |
| ೫೦ ತೋ. ಮಿ. ತಾ. ೨೮ | | ೫೦ ಕೀ. ಖಾ. ತಾ. ೧ | |
| ೫೨ | | ೫೦ | |

### ಕಿಲಕು ಮಾಲಿನ ಖಾತೆ ಪಾನು ೧೮

| ಜಮೆ | ರೂ. | ಖರ್ಚ | ರೂ. |
| --- | --- | --- | --- |
| ೧ ತೋ. ಮಿ. ತಾ. ೨೮ | | ೧ ಕೀ. ಖಾ. ತಾ. ೨೮ | |
| ೧ | | ೧ | |

### (ಆ) ಬಾಕಿಗಳ ತಾಳೆ ಪಾನು ೧೯

ತಾ. ೨೮—೨—೧೯೪೫

| ಜಮೆ | ರೂ. | ಖರ್ಚ | ರೂ. |
| --- | --- | --- | --- |
| ೪೬೦ | ಖುದ್ದ ಖಾತೆ | ೧೦೮ | ಕೆನರಾ ಬ್ಯಾಂಕ ಖಾತೆ |
| ೭೦ | ಪಗಾರ ಖಾತೆ | ೨೧೫ | ಪಾಗೀನೆಗಳ ಖಾತೆ |
| ೩-೮-೦ | ಸುನಗದ ರಾಜೇಸಾಹೇಬರ ಖಾತೆ | ೧೦೨ | ಭಾಂಡೆಗಳ ಖಾತೆ |
| | | ೫೦ | ಇತರ ಸಾಮಾನುಗಳ ಖಾತೆ |
| | | ೦-೮-೨ | ಸಾದಿಲವಾರ ಖಾತೆ |
| | | ೧೪ | ಧಾನ್ಯದ ಖಾತೆ |
| | | ೬-೮-೦ | ಎಣ್ಣೆ ಉಸುವಲಗಳ ಖಾತೆ |
| | | ೩-೭-೦ | ಕಿರಾಣಿ ಸಾಮಾನುಗಳ ಖಾತೆ |

| ರೂ. | ಜಮೆ | ರೂ. | ಖರ್ಚು |
|---|---|---|---|
| | | ೨ | ಜವಳಿಯ ಖಾತೆ |
| | | ೧-೯-೦ | ಇತರ ಖರ್ಚು ಖಾತೆ |
| | | ೪ | ಕಿರಕೋಳ ಖಾತೆ |
| | | ೮ | ಹೈನದ ಖಾತೆ |
| | | ೧ | ಶಿಲಕು ಮಾಲಿನ ಖಾತೆ |
| | | ೪೭ ೮-೦ | ಕೊನೆಯ ರೋಖ ಶಿಲಕು |
| ೫೫೩-೮-೦ | | ೫೫೩-೮-೦ | |

## (ಬ) ಉತ್ಪನ್ನ ಖರ್ಚಿನ ಖಾತೆ ಪಾನು ೨೦

೧೯೪೫ರ ಫೇಬ್ರುವರಿ ತಿಂಗಳು

| ಜಮೆ | ರೂ. | ಖರ್ಚು | ರೂ. |
|---|---|---|---|
| ೬೦ | ಪಗಾರ | ೦-೮-೦ | ಸಾದಿಲವಾರ |
| | | ೧೪-೦-೦ | ಧಾನ್ಯ |
| | | ೬-೮-೦ | ಎಣ್ಣೆ ಉರುವಲ |
| | | ೩-೮-೦ | ಕಿರಾಣಿ ಸಾಮಾನು |
| | | ೨-೦-೦ | ಜವಳಿ |
| | | ೧-೮-೦ | ಇತರ ಖರ್ಚು |
| | | ೪ | ಕಿರುಕೋಳ |
| | | ೮ | ಹೈನ |
| ೮೦ | | ೪೦ | ನಕ್ಕೀ ಉಳಿತಾಯ |
| | | ೮೦ | |

## (ಕ) ಆಢಾವೆ ಖಾತೆ ಪಾನು ೧

ತಾ. ೨೮—೨೧೯೪೫

| ಜಮೆ | ರೂ. | ಖರ್ಚು | ರೂ. |
|---|---|---|---|
| ೪೭೦ | ಖುದ್ದ ಖಾತೆ | ೧೦೦ | ಕೆನರಾಬ್ಯಾಂಕ |
| ೪೦ | ನಕ್ಕೀ ಉತ್ಪನ್ನ | ೨೧೫ | ದಾಗೀನೆಗಳು |
| ೩-೮-೦ | ಸುನಗದ ರಾಜೇಸಾಬರಿಗೆ ಕೊಡತಕ್ಕದ್ದು | ೧೦೦ | ಭಾಂಡೆಗಳು |
| | | ೩೦ | ಇತರ ಸಾಮಾನುಗಳು |
| | | ೧ | ಶಿಲಕು ಮಾಲಿನ ಬೆಲೆ |
| | | ೪೭-೮-೦ | ರೋಖ ಶಿಲಕು |
| ೫೧೩-೮-೦ | | ೫೧೩-೮-೦ | |

ಟೀಪು:— ಬಾಕಿಗಳ ತಾಳೆಗಳನ್ನು ತೆಗೆಯುವಾಗ್ಗೆ, ಶಿಲಕು ಉಳಿದ ಮಾಲಿನ ಜಮಾಖರ್ಚನ್ನು ಮಾಡುವ ರೀತಿಗಳು ಎರಡು.

(೧) ಆಧಾವೆಯನ್ನು ತೆಗೆಯುವ ದಿವಸ ಶಿಲಕು ಉಳಿದ ಮಾಲನ್ನು ಕೊನೆಯ ಶಿಲಕು ಮಾಲಿನ ಖಾತೆಗೆ ಖರ್ಚು ಬರೆದು ಆಯಾ ಖಾತೆಗೆ ಜಮಾ ಮಾಡಬೇಕು. ಈ ರೀತಿಯಿಂದ ಜಮಾಖರ್ಚು ಮಾಡಿದಾಗ ಬಾಕಿಗಳ ತಾಳೆಯಲ್ಲಿ ಕೊನೆಯ ಶಿಲಕು ಮಾಲಿನ ಬೆಲೆ ಕೂಡಿಸಬೇಕು.

(೨) ಸಾಧಾರಣವಾಗಿ ಕೊನೆಯ ಶಿಲಕು ಮಾಲಿನ ಬೆಲೆ ಬಾಕಿಗಳ ತಾಳೆಯಲ್ಲಿ ಕೂಡಿರುವದಿಲ್ಲ. ಅಂಥಲ್ಲಿ ಕೊನೆಯ ಶಿಲಕು ಮಾಲಿನ ಬೆಲೆ ಬೇರೆ ಹೇಳಿರುವದು. ಹೀಗೆ ಹೇಳಿದಾಗ ಕೊನೆಯ ಶಿಲಕು ಮಾಲಿನ ಬೆಲೆಯನ್ನು ಉತ್ಪನ್ನ ಖರ್ಚಿನ ಖಾತೆಗೆ ಜಮಾ ಮಾಡಿ ಆಧಾವೆ ಖಾತೆಗೆ ಖರ್ಚು ಬರೆಯಬೇಕು

### ಭಾಂಡಿಗಳು ಮತ್ತು ಇತರ ಸಾಮಾನುಗಳು, ಜವಳಿ ಮುಂತಾದವುಗಳ ಪಟ್ಟಿಗಳನ್ನು ಕೆಳಗೆ ತೋರಿಸಿದಂತೆ ಬರೆಯಬೇಕು.

### ದಾಗೀನೆಗಳ ಪಟ್ಟಿಯು

| ನಂ. | ಹೆಸರು | ಸಂಖ್ಯೆ | ತೂಕ | ದರ | ಒಟ್ಟು ಬೆಲೆ | ಕೊಂಡ ತಾ. |
|---|---|---|---|---|---|---|
| ೧ | ಬಂಗಾರದ ಉಂಗುರಗಳು | ೪ | ೧ ತೊಲೆ ಯಂತೆ | ರೂ. ೫೦ | ರೂ. ೨೦೦ | ೧-೧-೧೯೪೬ |
| ೨ | ಬೆಳ್ಳಿಯ ಸರಪಳಿ | ೧ ಜೋಡು | ೧೨ ತೊಲೆ | ರೂ. ಆ. ೧ ೪ | ೧೫ | ೨೦-೨-೧೯೪೫ |
| | | | | | ೨೧೫ | |

# ಏಳನೆಯ ಪ್ರಕರಣ

## ವ್ಯಾಖ್ಯೆಗಳು

ಐದೂ ಪ್ರಕರಣದಲ್ಲಿ ಬಂದ ವ್ಯಾಖ್ಯೆಗಳನ್ನು ಬೇಕಾದಾಗ ಒಂದೇ ಕಡೆಯಲ್ಲಿ ಒಮ್ಮೆಲೆ ನೋಡಿಕೊಳ್ಳಲಿಕ್ಕೆ ಬರಬೇಕೆಂದು ಕ್ರಮದಿಂದ ಇಲ್ಲಿ ಕೊಟ್ಟಿರುತ್ತದೆ.

### ಪ್ರ. ೧.

ನಿತ್ಯವಾರ ನಡೆದ ಹಣದ ವ್ಯವಹಾರಗಳನ್ನು ಪರಿಣಾಮವಾರ, ವ್ಯಕ್ತಿವಾರ, ವಿಲೇವಾರಿ ಮಾಡಿ ಬರೆದಿಡುವ ಲೆಕ್ಕಕ್ಕೆ ಜಮಾಖರ್ಚು ಅನ್ನುವರು.

ಹಣದಿಂದ ಪದಾರ್ಥವನ್ನು ಕೊಳ್ಳುವದಕ್ಕೆ (ಖರೀದಿ) ಇಲ್ಲವೆ, ಅದನ್ನು ಹಣದ ಸಲುವಾಗಿ ಮಾರುವದಕ್ಕೆ(ವಿಕ್ರಿಗೆ) ರೂಢಿಯೊಳಗೆ ವ್ಯವಹಾರವೆನ್ನುವರು.

ಹಣದ ಬರೋಣವು ಅಥವಾ ಹೋಗೋಣವು ವ್ಯವಹಾರದ ಪರಿಣಾಮವೆನಿಸುವದು.

ಯಾವದೊಂದು ವ್ಯಕ್ತಿಯ ಸಂಬಂಧವಾಗಿ ಆದ ವ್ಯವಹಾರಗಳನ್ನು ಪರಿಣಾಮವಾರ ಒಂದೇ ಕಡೆಯಲ್ಲಿ ಬರೆಯುವದಕ್ಕೆ ಖಾತೆ ಅನ್ನುವರು.

ವ್ಯವಹಾರದ ವಿಶೇಷ ವರ್ಣನೆಗೆ ತಪಶೀಲು ಅನ್ನುವರು.

ವ್ಯವಹಾರದಿಂದ ಪ್ರತ್ಯಕ್ಷ ರಕಮು ಬಂದರೆ ಅಥವಾ ಹೋದರೆ ರೋಖು ರಕಮು ಎನ್ನುವರು.

ಎರಡು ವ್ಯವಹಾರಗಳ ರಕಮುಗಳು ಸರಿಯಾಗಿಯೂ ಪರಿಣಾಮಗಳ ವಿರುದ್ಧವಾಗಿಯೂ ಖಾತೆಗಳು ಭಿನ್ನವಾಗಿಯೂ ಇದ್ದರೆ, ಆ ರಕಮಿಗೆ ಪರಭಾರೆ ಅನ್ನುವರು. ಇದಕ್ಕೆ ಜಮಾಖರ್ಚು ಎಂತಲೂ ಅನ್ನುವರು.

### ಪ್ರ. ೨.

ವ್ಯವಹಾರಸ್ಥನು ತನ್ನಲ್ಲಿ ನಡೆದ ವ್ಯವಹಾರಗಳನ್ನು ಪರಿಣಾಮವಾರ ವಿಲೇವಾರಿ ಮಾಡಿ, ಬರೆದು ಶಿಲಕು ತೆಗೆಯುವ ವಹಿಗೆ ಕೀರ್ದಿ ಅನ್ನುವರು.

ಪ್ರತಿದಿವಸ ನಡೆದ ಎಲ್ಲ ವ್ಯವಹಾರಗಳನ್ನು ಪರಿಣಾಮವಾರ ವಿಲೇವಾರಿ ಮಾಡಿ ಆಗಾಗ್ಗೆ ತಪಶೀಲವಾರ ಬರೆದು ಪ್ರತಿದಿನ ಶಿಲಕು ತೆಗೆಯುವ ವಹಿಗೆ ರೋಜಕೀರ್ದಿ ಅನ್ನುವರು.

ಎಲ್ಲ ವ್ಯವಹಾರಗಳನ್ನು ಪರಿಣಾಮವಾರ ವಿಲೇವಾರಿ ಮಾಡಿ ಆಗಾಗ್ಗೆ ತಪಶೀಲವಾರ ಬರೆದು (ಪ್ರತಿದಿವಸ ಶಿಲಕು ತೆಗೆಯದೆ) ತಮಗೆ ಕೂಡಿದಾಗ ಅಂದರೆ ವಾರಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆ ಶಿಲಕು ತೆಗೆಯುವ ವಹಿಗೆ ಬೈಠಕೀರ್ದಿ ಅನ್ನುವರು

ವ್ಯಾಪಾರಕ್ಕಾಗಿ ಕೂಡಿಸಿದ ಹಣಕ್ಕೆ ಭಾಂಡವಲು ಅನ್ನುವರು.

## ಪ್ರ. ೩.

ವ್ಯವಹಾರಗಳ ಗೋಷವಾರೆಯನ್ನು ಬರೆದಿರುವ ಖಾತೆಗಳ ವಹಿಗೆ ಖತಾವಣಿ ಅನ್ನುವರು.

ವ್ಯವಹಾರಗಳ ತಪಶೀಲನ್ನು ಬರೆದಿರುವ ಖಾತೆಗಳ ವಹಿಗೆ ಪಡಾಜವಟಿ ಅನ್ನುವರು.

ಒಬ್ಬ ಮನುಷ್ಯನ ಅಥವಾ ಸಂಘದ ಸಂಬಂಧದ ವ್ಯವಹಾರಗಳನ್ನು ತೋರಿಸುವ ಖಾತೆಗಳಿಗೆ ಇಸಮಿನ ಖಾತೆಗಳೆನ್ನುವರು.

ಜೀನಸುಗಳ ಮತ್ತು ಆಸ್ತಿಗಳ ಸಂಬಂಧದ ವ್ಯವಹಾರಗಳನ್ನು ತೋರಿಸುವ ಖಾತೆಗಳಿಗೆ ಜೀನಸಿನ ಖಾತೆಗಳೆನ್ನುವರು.

ಖರ್ಚಿನ ಮತ್ತು ಉತ್ಪನ್ನದ ವ್ಯವಹಾರಗಳನ್ನು ತೋರಿಸುವ ಖಾತೆಗಳಿಗೆ ಬಾಬಿನ ಖಾತೆಗಳೆನ್ನುವರು.

## ಪ್ರ. ೪.

ಪ್ರತಿಯೊಂದು ಖಾತೆಯ ಬಾಕಿಯು (ಉಳಿದಿದ್ದರೆ) ಗೊತ್ತಾಗಬೇಕೆಂದು ಆದರ ಎರಡೂ ಬದಿಗಳ ರಕಮುಗಳನ್ನು ಸರಿಮಾಡುವದಕ್ಕೆ ತೋಂಡಮಿಳವಣಿ ಅಥವಾ ಬಾಯಿಗೂಡಿಸೋಣ ಅನ್ನುವರು.

ಯಾವದೊಂದು ಖಾತೆಯ ಬಾಕಿಯು ಎಂದೂ ಬಾರದಂಥದು ಅಥವಾ ಬರುವಂತೆ ಇದ್ದರೆ ಆದಕ್ಕೆ ಕಚ್ಚಾಬಾಕಿ ಅನ್ನುವರು.

ಯಾವದೊಂದು ಖಾತೆಯ ಬಾಕಿಯು ಕೈಯಲ್ಲಿದ್ದರೆ, ಅಥವಾ ಎಂದಾದರೂ ಬರುವಂತೆ ಇಲ್ಲವೆ ಕೊಡುವಂತೆ ಇದ್ದರೆ ಅದಕ್ಕೆ ಪಕ್ಕಾಬಾಕಿ ಅನ್ನುವರು.

ಕಚ್ಚಾಬಾಕಿಗಳನ್ನು ಬರೆದಿರುವ ಖಾತೆಗೆ ಲಾಭಹಾನಿ ಖಾತೆ ಅನ್ನುವರು.

ಪಕ್ಕಾಬಾಕಿಗಳನ್ನು ಬರೆದಿರುವ ಖಾತೆಗೆ ಆಢಾವೆ ಅಥವಾ ಕೊಡಕೊಳ್ಳುವ ಖಾತೆ ಅನ್ನುವರು.

## ಪ್ರ. ೫.

ಒಂದು ನಿಯಮಿತ ವೇಳೆಯಲ್ಲಿ (ಅವಧಿಯಲ್ಲಿ) ಬರೆದ ಜಮಾಖರ್ಚ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುವ ಇಲ್ಲವೆ ನೋಳ ನೋಡುವ ಪ್ರಕಾರಗಳಿಗೆ ತಾಳೆಗಳನ್ನುವರು.

---

# ಪರೀಕ್ಷೆಯ ಪ್ರಶ್ನೆಗಳ ಕಾಗದಗಳು

## ಪ್ರಾ. ಶಾ. ಪ್ರ. ಪ. ಪರೀಕ್ಷೆ ೧೯೪೮

## ಜಮಾಖರ್ಚು

೧ ಕೆಳಗಿನ ವ್ಯವಹಾರವು ನಿನ್ನೆ ನಡೆಯಿತೆಂದು ತಿಳಿದು, ರೋಜಕೀರ್ದಿಯನ್ನು ಬರೆಯಿರಿ ಮತ್ತು ಶಿಲಕು ತೆಗೆಯಿರಿ; ಪ್ರಾರಂಭದ ಶಿಲಕು ರೂ ೩೨೫-೬-೩ ಇರುತ್ತದೆ:—

(ಅ) ನಿಮ್ಮ ಕಡೆಯಿಂದ ಕೆಲವು ದಿನಗಳ ಹಿಂದೆ ವಾಸುದೇವ ಗಣೇಶ ಇವರು ಸಾಲ ತೆಗೆದುಕೊಂಡು ಹೋದ ೩೦೦ ರೂ. ಗಳ ಬಾಬತು ೨೭ ರೂ. ಬಡ್ಡಿಯನ್ನು ತಂದುಕೊಟ್ಟರು.

(ಬ) ರಾಮದಾಸ ಸದಾಶಿವ ಇವರಿಂದ ತಂದ ಸಾಲದ ಬಾಬತು ಅವರಿಗೆ ಇಂಪೀರಿಯಲ್ ಬ್ಯಾಂಕಿನ ೫೦೦ ರೂ. ಗಳ ಚೆಕ್ಕು ಕೊಟ್ಟಿತು.

(ಕ) ೬೦ ರೂ. ಗಳಿಗೆ ಒಂದು ಮಣದಂತೆ, ಪ್ರತಿಯೊಂದು ಡಬ್ಬಿಯಲ್ಲಿ ೩೫ ಪೌಂಡು ತುಪ್ಪ ಹಿಡಿಯುವಂಥ ಎರಡು ತುಪ್ಪದ ಡಬ್ಬಿಗಳನ್ನು ನಿಮ್ಮ ಅಂಗಡಿಯಿಂದ ಗೋಪಾಲ ವಿಠ್ಠಲ ಪಾಟೀಲ ಇವರು ಉದ್ದರಿ ಒಯ್ದರು. ಪ್ರತಿಯೊಂದು ಖಾಲೀ ಡಬ್ಬಿಯ ಬೆಲೆ ೩ ರೂ. ಹಿಡಿಯಬೇಕು. ಒಂದು ರೂಪಾಯಿಗೆ ಅರ್ಧ ಆಣೆಯಂತೆ ಮಾರಾಟದ ಕರ ಹಾಕಬೇಕು.

(ಡ) ಸವಿಯಾಪದ ಹಿಂದೂ ಅನಾಥಾಶ್ರಮಕ್ಕೆ ೧೦೧ ರೂ. ಗಳ ದೇಣಿಗೆ ಮಾಡುವದಾಗಿ ವಚನ ಕೊಟ್ಟಿದ್ದು, ಅವುಗಳ ಪೈಕಿ ೫೦ ರೂ. ರೋಖ ಕೊಟ್ಟಿತು.

(ಇ) ದಾರಿಯಲ್ಲಿ ಒಂದು ಐದು ರೂ ನೋಟು ಸಿಕ್ಕಿತು. ನಿಮ್ಮ ಕಕ್ಕನ ಮಗನಾದ ಸುರೇಶನಿಗೆ ೫ ರೂ. ಉಡುಗೊರೆ ಕೊಟ್ಟಿತು.

೨ ಕೆಳಗೆ ಕೊಟ್ಟವುಗಳಲ್ಲಿ ಬೇಕಾದ ಐದು ವಿಷಯಗಳನ್ನು ಕುರಿತು ಉದಾಹರಣೆ ಸಹಿತ ಸ್ಪಷ್ಟೀಕರಿಸಿರಿ:—

ಕ್ರಯಪಟ್ಟಿ, ಹವಾಲಿ, ಪೋಸ್ಟಲ್ ಆರ್ಡರ್, ಪ್ರಾಮಿಸರಿ ನೋಟ, ಆಜ್ಞಾಪತ್ರಿಕೆ, ಅಮಾನತ ಖಾತೆ, ಟ್ರೆಝರಿ ಬಿಲ್ಲು.

೩ ಹುಂಡಿಯೆಂದರೇನು? ಅದರ ಬೇರೆ ಬೇರೆ ಪ್ರಕಾರಗಳಾವವು? ಒಂದು ಪ್ರಕಾರದ ಹುಂಡಿಯನ್ನು ಉದಾಹರಿಸಿರಿ ಹುಂಡಿಯನ್ನು ಹೇಗೆ ಮುರಿಸುವಿರಿ?

೪ ಭಾಗವತ ನರಹರಿ ರಾಮಚಂದ್ರ ಇವರು ವಿಕ್ರಮ ಸಂವತ್ಸರ ೨೦೦೩ ಆಶ್ವೀನ ಅಮಾವಾಸ್ಯೆಯ ವರೆಗೆ ನಿಮ್ಮಲ್ಲಿ ಮಾಡಿದ ವ್ಯವಹಾರದಲ್ಲಿ ೧೦೦ಕ್ಕೆ ವರ್ಷಕ್ಕೆ ೬ರಂತೆ ಬಡ್ಡಿಯ ಆಕರಣೆ ಮಾಡಿರಿ:—

[ಅ] ಹಿಂದಿನ ಲೆಖ್ಖದ ಪ್ರಕಾರ, ವಿಕ್ರಮ ಸಂವತ್ಸರ ೨೦೦೩ ಕಾರ್ತಿಕ ಶುದ್ಧ ಪ್ರತಿಪದೆ ದಿವಸ, ಅವರಿಂದ ನಿಮಗೆ ೮೦೦ ರೂ. ಬರತಕ್ಕದ್ದಿತ್ತು.

[ಬ] ಫಾಲ್ಗುಣ ವದ್ಯ ಪಂಚಮಿಯ ದಿನ ಅವರು ೫೦೦ ರೂ. ಕೊಟ್ಟರು.

[ಕ] ಜೇಷ್ಠ ಶುದ್ಧ ಸಪ್ತಮಿಯ ದಿನ ೪೦೦ ರೂ. ಸಾಲ ಒಯ್ದರು.

[ಡ] ಶ್ರಾವಣ ಶುದ್ಧ ಏಕಾದಶಿಯ ದಿನ ೧೫೦ ರೂ. ಮುಟ್ಟಿಸಿದರು

೫ [ಅ] ಕೆಳಗಿನ ಸಂಗತಿಯನ್ನು ಕೀರ್ದಿಯಲ್ಲಿ ಯಾವ ಪ್ರಕಾರ ಬರೆಯುವಿರೆಂಬುದನ್ನು ಸ್ಪಷ್ಟೀಕರಿಸಿರಿ:—

ಪ್ರತಿಯೊಂದಕ್ಕೆ ೧೦ ರೂ. ಬೆಲೆಯಿದ್ದಂಥ ೫ ಕ್ಯಾಶ ಸರ್ಟಿಫಿಕೇಟುಗಳನ್ನು, ೫ ವರ್ಷಗಳ ಹಿಂದೆ, ೯ ರೂ. ೪ ಆ. ಗಳಿಗೊಂದರಂತೆ ಕೊಂಡಿತು. ಅವುಗಳ ಮುದ್ದತು ಇಂದಿಗೆ ಮುಗಿಯಿತು. ಅದ್ದರಿಂದ ಅವನ್ನು ಈ ದಿನ ಮುರಿಸಿತು.

[ಬ] "ಖರ್ಚಿನ ವಿವರದ ಪ್ರಕಾರ ಜಮಾ ಹಿಡಿಯಲ್ಪಟ್ಟಿತು" ಎಂದು ಯಾವಾಗ ಬರೆಯುವಿರಿ? ಒಂದು ಉದಾಹರಣೆಯನ್ನು ಕೊಡಿರಿ.

೬ [ಅ] ನಿಮ್ಮ ಶಿಲಕಿನಲ್ಲಿ ಯಾವ ಬಗೆಯ ಹೆಚ್ಚು ಕಡಿಮೆ ಮಾಡದಂಥ ವ್ಯವಹಾರಗಳ ಐದು ಭಿನ್ನ ಭಿನ್ನ ಉದಾಹರಣೆಗಳನ್ನು ಕೊಡಿರಿ:—

[ಬ] 'ಅ'ನಿಂದ ಬರಬೇಕಾದ ಹಣವು ಬಂದ ಕೂಡಲೆ ಅದನ್ನು ತಪ್ಪಿ 'ಬ'ನ ಖಾತೆಗೆ ಜಮಾ ತೆಗೆದುಕೊಂಡಿತು. ಈ ತಪ್ಪು ಯಾವಾಗ ಸಿಗುವದು? ಇದನ್ನು ಹೇಗೆ ಸರಿಪಡಿಸುವಿರಿ.

ಅಥವಾ

ಡಕ್ಕಿನ ಮೇಲೆ "ಕ್ರಾಸ"ನ್ನು ಯಾಕೆ ಮಾಡುತ್ತಾರೆ?

---

ಗಂಡು ಮಕ್ಕಳ ಪ್ರಾ. ಶಾ. ಪ್ರ. ಪ. ಪರೀಕ್ಷೆ ೧೯೪೬ (ಪುರವಣಿ)

೧ ಮುಂದಿನ ವ್ಯವಹಾರಗಳು ನಿನ್ನೆಯಾದವೆಂದು ತಿಳಿದು ಅವುಗಳನ್ನು ದಿನವಹಿಯಲ್ಲಿ[ಕೀರ್ದಿಯಲ್ಲಿ] ಬರೆಯಿರಿ ಮತ್ತು ಕೊನೆಯ ದಿನದ ಶಿಲಕನ್ನು ತೆಗೆಯಿರಿ. ಆರಂಭದ ಶಿಲಕು ೬೬೮ ರೂ. ೫ ಆ. ೦ ಪೈ. ಅದೆ.

[೧] ಶಾಮರಾವ ಗೋವಿಂದ ಕಾಳೆ ಇವರಿಂದ ಅವರು ಕೊಡತಕ್ಕ ಸಾಲದ ಬಾಬತು ೫೧೫ ರೂ. ಕೆಳಗೆ ಕೊಟ್ಟಂತೆ ಬಂದವು:—

೩೦೦ ರೂ. ರೋಖ

೧೫೦ ರೂ. ಬೆಲೆಯ ೧೦ ಪಲ್ಲೆ ಗೋದಿ, ಪಲ್ಲೆಗೆ ರೂ. ೧೨೦ ರಂತೆ. ಉಳಿದದ್ದರ ಬಗ್ಗೆ ದನಗಳ ಮೇವು.

[೨] ದಕ್ಷಿಣ ವಸ್ತ್ರಭಾಂಡಾರಕ್ಕೆ, ಕೊಂಡ ಅರಿವೆಯ ಬಗ್ಗೆ ೩೦೦ ರೂ. ಗಳ ಚೆಕ್ಕನ್ನು ಕರ್ನಾಟಕ ಬ್ಯಾಂಕಿನ ಮೇಲೆ ಕೊಡಲಾಯಿತು.

[೩] ಅಕ್ಟೋಬರ ನವ್ಹಂಬರ ತಿಂಗಳ ಫೀ ರೂ. ೬-೦-೦ ಮಗ ಗೋಪಾಲನಿಗೆ ಕೊಡಲಾಯಿತು.

[೪] ಪಾತ್ರೆಗಳಿಗೆ ಕಲಾಯಿ ಮಾಡಿದ ಬಗ್ಗೆ ರೂ ೧೨-೦-೦.

[೫] ಮರಾಠಾ ಎಜ್ಯುಕೇಶನ್ ಸೊಸಾಯಿಟಿಗೆ ೧೦೧ ರೂ. ದೇಣಗಿ ಎಂದು ಕೊಡಲಾಯಿತು.

೨ [ಅ] ಕಂಸದಲ್ಲಿ ಕೊಟ್ಟ ಶಬ್ದಗಳಲ್ಲಿ ಯೋಗ್ಯ ಶಬ್ದವನ್ನಿಟ್ಟು ಉಳಿದದ್ದನ್ನು ಕಾಟುಹೊಡೆಯಿರಿ.

[೧] ೨೫ ರೂ. ಗಳನ್ನು ರಾಮದಾಸ ರಿಲೀಫ ಫಂಡಿಗೆ ಕೊಡಲಾಯಿತು. ಈ ಹಣವನ್ನು [ದೇಣಗೀ, ರಾಮದಾಸ] ಖಾತೆಗೆ [ಜಮಾ ಮಾಡಬೇಕು, ಖರ್ಚು ಹಾಕಬೇಕು.]

[೨] ಮನಿಯಾರ್ಡರವು [ಶಹಾಜೋಗ, ನಾಮಜೋಗ] ಮತ್ತು [ದರ್ಶನೀ, ಮುದತೀ] ಹುಂಡಿಯು.

[೩] ಹತ್ತು ರೂ ಗಳ ನೋಟನ್ನು ಕಳಕೊಂಡೆನು. ಈ ರಕಮನ್ನು [ಮುಂಗಡ, ಲಾಭಹಾನಿ] ಖಾತೆಗೆ [ಜಮಾ ಮಾಡಬೇಕು, ಖರ್ಚು ಹಾಕಬೇಕು.]

[ಬ] ತೆರವಿಟ್ಟ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ:—

[೧] ಹವಾಲೆಗೆ ಮೂರು ಜನರು ಬೇಕು. ಅವರು ಯಾರೆಂದರೆ ..........., ..........................., ........................... .

[೨] ಸಾವುಕಾರನು ತಾನು ಕೊಟ್ಟ ಸಾಲದ ಬಗ್ಗೆ ಪ್ರೊಮಿಸರೀ ನೋಟನ್ನು ತಕ್ಕೊಂಡರೆ, ಅವನು ಆ ರಕಮನ್ನು ........................ ಖಾತೆಗೆ.............. .

[೩] ಚೆಕ್ಕಿನ ಪ್ರಕಾರಗಳು ಯಾವವೆಂದರೆ................ಮತ್ತು................ .

೩ [ಅ] ಜಮಾಖರ್ಚು ಬರೆಯುವಾಗ ತೇರೀಜಿನ ಅವಶ್ಯಕತೆ ಏನು?

[ಬ] ತೇರೀಜಿನ ಎಷ್ಟು ಪ್ರಕಾರಗಳಿರುತ್ತವೆ?

[ಕ] ರೋಜಕೀರ್ದಿಯ ತಿಂಗಳ ತೇರೀಜನ್ನು ಹೇಗೆ ಮಾಡುತ್ತಾರೆಂಬುದನ್ನು ಹೇಳಿರಿ.

೪ ಕೆಳಗೆ ಕೊಟ್ಟವುಗಳಲ್ಲಿ ಬೇಕಾದ ಎರಡರಲ್ಲಿ ಇರುವ ಭೇದಗಳನ್ನು ಹೇಳಿರಿ:

[೧] ರೋಜಖರ್ಡಾ ಮತ್ತು ರೋಜಕೀರ್ದಿ.

[೨] ಪಠಾಣವಹಿ ಮತ್ತು ಖತಾವಣಿ.

[೩] ಅವ್ವಲ ಆಥಾವೆ ಮತ್ತು ಅಖೇರ ಆಥಾವೆ.

# ಪ್ರಕಟನೆ




ಪುಸ್ತಕವನ್ನು ಧಾರವಾಡದಲ್ಲಿ ಶ್ರೀಯುತ ಎನ್ ಎಸ್ ಬೆಂಗೇರಿ ಇವರು
ವಿಜಯ ಮುದ್ರಾಲಯದಲ್ಲಿ ಮುದ್ರಿಸಿದರು
ಮತ್ತು ಎನ್ ವ್ಹಿ. ಕುರಡಿ ಧಾರವಾಡ ಇವರು ಪ್ರಕಟಿಸಿದರು

# ಆಕಳವಾಡಿ ಬುಕ್ ಡಿಪೊ
# ಧಾರವಾಡ



( ವಿಜಯ ಟಾಕೀಜ ಎದುರಿನ ಹೊಸ ಕಟ್ಟಡದಲ್ಲಿ )



ನಮ್ಮಲ್ಲಿ ಕನ್ನಡ, ಹಿಂದಿ, ಇಂಗ್ಲೀಷ, ಮರಾಠಿ ಶಾಲೋಪಯೋಗಿ ಎಲ್ಲ ಪುಸ್ತಕಗಳೂ, ಕಥೆ, ಕಾದಂಬರಿಗಳೂ ವಿದ್ಯಾರ್ಥಿಗಳಿಗೆ ಬೇಕಾಗುವ ಎಲ್ಲ ತರದ ಸ್ಟೇಶನರಿ ಸಾಮಾನುಗಳೂ, ಇಲೆಕ್ಟ್ರಿಕ್ ಸಾಮಾನುಗಳೂ ಯೋಗ್ಯ ಬೆಲೆಗೆ ಠೋಕಾಗಿಯೂ, ಚಿಲ್ಲರೆಯಾಗಿಯೂ ಸಿಗುತ್ತವೆ.

ಅಲ್ಲದೆ-ಪರಸ್ಪರ ಸಹಕಾರಿ ಸಂಘ, ಗ್ರಾಮ ಪಂಚಾಯತಿ, ಸಾವುಕಾರಿಕೆ, ಬಡ್ಡಿ ವ್ಯವಹಾರದವರಿಗೆ ಮೊದಲಾದ ಸಂಸ್ಥೆಗಳಿಗೆ ಬೇಕಾಗುವ ಎಲ್ಲ ನಮೂನೆಯ ಲೆಕ್ಕದ ಪುಸ್ತಕ ಫಾರ್ಮು ಮೊದಲಾದವುಗಳನ್ನು ಸಹ ಪೂರೈಸುತ್ತೇವೆ.



ಒಡೆಯರು:

ರಾಮಣ್ಣಾ ಈಶ್ವರಪ್ಪಾ ಆಕಳವಾಡಿ